ಕೆ. ನರಸಿಂಹಮೂರ್ತಿ

ವಿ. ಸೀತಾರಾಮಯ್ಯ

ಜಿ. ಎಚ್. ನಾಯಕ

ಬಿ. ಸಿ. ರಾಮಚಂದ್ರಶರ್ಮ

ಎಲ್. ಎಸ್. ಶೇಷಗಿರಿರಾವ್

ಹೆಚ್. ಎಸ್. ರಾಘವೇಂದ್ರ ರಾವ್



ಕೆ. ಎಸ್. ನಿಸಾರ್ ಅಹಮದ್

ನೀಲತ್ತಹಳ್ಳಿ ಕಸ್ತೂರಿ

ವಿಜಯಾ



# ಅಂಕಣ

## ಮಾಸ್ತಿ ವಿಶೇಷಾಂಕ

ಅಂಕಣ ಜುಲೈ ಆಗಸ್ಟ್ 1986 ಸಂಪುಟ 7 ಸಂಚಿಕೆ 6

ಅಂಕಣದ 'ಮಾಸ್ತಿ ವಿಶೇಷಾಂಕ' ನಿಮ್ಮ ಕೈಯಲ್ಲಿದೆ. ಸಾಹಿತ್ಯಕ ಪತ್ರಿಕೆಗಳು ಸದಾ ಎದುರಿಸುವ ಕೆಲವು ಅನಿವಾರ್ಯ ಕಾರಣಗಳಿಂದ ಸಂಚಿಕೆ ತಡವಾಯಿತು. ದಯವಿಟ್ಟು ಸಹಕರಿಸಿ.

ಮಾಸ್ತಿಯವರು, ಬೇರೆ ಬೇರೆ ಕಾಲ ಮತ್ತು ಸಂದರ್ಭಗಳಲ್ಲಿ ಪತ್ರಿಕೆಗಳಿಗೆ ಮತ್ತು ಆಕಾಶ ವಾಣಿಗೆ ನೀಡಿದ ಸಂದರ್ಶನಗಳನ್ನು ಇಲ್ಲಿ ಸಂಕಲನ ಮಾಡಲಾಗಿದೆ. ಹೀಗೆ ಮಾಡುವುದರಿಂದ ಮಾಸ್ತಿಯವರ ವ್ಯಕ್ತಿತ್ವ ಮತ್ತು ವಿಚಾರಗಳ ಹಲವು ಮುಖಗಳು ಅನಾವರಣವಾಗುತ್ತವೆಂದು ನಮ್ಮ ನಂಬಿಕೆ. ನಮ್ಮ ಗಮನಕ್ಕೆ ಬರದೆ ಉಳಿದಿರಬಹುದಾದ ಸಂದರ್ಶನಗಳ ಬಗ್ಗೆ ಮಾಹಿತಿ ಕೊಡಬೇಕಾಗಿ ಓದುಗರಲ್ಲಿ ವಿನಂತಿ.

ಈ ಸಂಚಿಕೆಯಲ್ಲಿರುವ, ಶ್ರೀ ಎಲ್. ಎಸ್. ಶೇಷಗಿರಿ ರಾವ್ ಅವರು ಮಾಡಿರುವ ಸಂದರ್ಶನ ಮತ್ತು ಶ್ರೀ ನೀಲತ್ತಹಳ್ಳಿ ಕಸ್ತೂರಿಯವರ ಲೇಖನಗಳ ಮೂಲ ಇಂಗ್ಲೀಷ್‌ನಲ್ಲಿದೆ. ಇವುಗಳನ್ನು ಕನ್ನಡಕ್ಕೆ ಅನುವಾದಿಸಿದವರು ಕ್ರಮವಾಗಿ ಶ್ರೀಮತಿ ವನಮಾಲಾ ವಿಶ್ವನಾಥ್ ಮತ್ತು ಶ್ರೀಮತಿ ಎಚ್. ಎಸ್. ಶ್ರೀಮತಿಯವರು. ಇವರಿಗೆ ಅಂಕಣ ಕೃತಜ್ಞವಾಗಿದೆ.

ವಿಶೇಷಾಂಕದ ನಿರ್ಮಾಣದಲ್ಲಿ ಸಹಕರಿಸಿದ ಸರ್ವಶ್ರೀ ಎ. ಜಿ. ವಿಜಯರಾಘವನ್, ನೀಲತ್ತಹಳ್ಳಿ ಕಸ್ತೂರಿ ಮತ್ತು ಬಿ. ಗುರುಮೂರ್ತಿಯವರಿಗೆ ಹಾಗೂ ಶ್ರೀಮತಿ ವಿಜಯಾರವರಿಗೆ ನಾವು ಕೃತಜ್ಞರು. ಎಲ್ಲ ಸಂದರ್ಶಕರಿಗೆ ಮತ್ತು ಸಂದರ್ಶನಗಳನ್ನು ಮೊದಲು ಹೊರತಂದ ಪ್ರಜಾವಾಣಿ, ಉದಯವಾಣಿ, ಮಲ್ಲಿಗೆ, ಶೂದ್ರ, ಭವನ್ಸ್ ಜರ್ನಲ್ ಮತ್ತು ಆಕಾಶವಾಣಿಗೆ ನಮ್ಮ ವಂದನೆಗಳು ಸಲ್ಲುತ್ತವೆ.

ಈ ಸಂಚಿಕೆಯ ಪ್ರಕಟಣೆಗಾಗಿ, ಜಾಹಿರಾತು ರೂಪದಲ್ಲಿ ಕರ್ನಾಟಕ ಸರ್ಕಾರವು ನೀಡಿದ ನೆರವು ನಮ್ಮ ಹೊರೆಯನ್ನು ಹಗುರಗೊಳಿಸಿದೆ. ಸಂಬಂಧಪಟ್ಟ ಅಧಿಕಾರಿಗಳಿಗೆ ಅಂಕಣ ಋಣಿಯಾಗಿದೆ.

'ಅಂಕಣ'

8 'ಚಿರಂಜೀವಿ' ಹಳೇ ಈಜು ಕೊಳದ ರಸ್ತೆ, ಕೋದಂಡರಾಮಪುರಂ, ಬೆಂಗಳೂರು-560 003

## ಈ ಸಂಚಿಕೆಯಲ್ಲಿ



ಪ್ರಕಟಣೆ : ಪಿ. ಪಿ. ಗೆಳೆಯರ ಬಳಗ
ವಾರ್ಷಿಕ ಚಂದಾ : ಹದಿನೈದು ರೂಪಾಯಿಗಳು
ಸ್ಥಾಯಿ ನಿಧಿ : ನೂರೈವತ್ತು ರೂಪಾಯಿಗಳು

# ಡಾ|| ಮಾಸ್ತಿ ವೆಂಕಟೇಶ ಅಯ್ಯಂಗಾರ್ ಅವರೊಡನೆ ಸಂದರ್ಶನ

ಡಾ|| ವಿ. ಸೀತಾರಾಮಯ್ಯ ಅವರಿಂದ

ವಿ. ಸೀ : ನಮಸ್ಕಾರ, ತಾವು ಇಲ್ಲಿ ಬಂದು ಇದನ್ನು ಒಪ್ಪಿಕೊಂಡಿದ್ದಕ್ಕೆ ನಮಗೆ ತುಂಬ ಸಂತೋಷವಾಗುತ್ತದೆ ಮತ್ತು ನನಗೆ ತಮ್ಮನ್ನು ಸಂದರ್ಶಿಸುವ ಅವಕಾಶ ದೊರೆತದ್ದು ತುಂಬಾ ಸಂತೋಷ ಉಂಟು ಮಾಡ್ತಿದೆ. ಒಂದೆರಡು ಪ್ರಶ್ನೆ ಕೇಳಬೇಕು ಅಂತಿದ್ದೇನೆ ಅದಕ್ಕೆ ದಯವಿಟ್ಟು ಉತ್ತರ ಕೊಡಬೇಕು.

ಮಾಸ್ತಿ : ಕೇಳಿ ಸ್ವಾಮಿ

ವಿ. ಸೀ : ತಾವು ಇಂಗ್ಲೀಷಿನಲ್ಲಿ ಬಿ. ಎ., ಎಂ.ಎ ಪರೀಕ್ಷೆಗಳಲ್ಲಿ ಮೇಲ್ತರದಲ್ಲಿ ತೇರ್ಗಡೆಯಾದವರು, ಮನೆ ಮಾತು ತಮಿಳು, ತೆಲುಗಿನ ಸೆರಗಿನ ಊರು ಮಾಸ್ತಿ. ಕನ್ನಡಕ್ಕೆ ಒಲಿದು ಅದರಲ್ಲಿ ಕೃತಿ ನಿರ್ಮಾಣ ಮಾಡಿದ ಸಂದರ್ಭವೊಂದನ್ನು ದಯವಿಟ್ಟು ತಿಳಿಸಬೇಕು.

ಮಾಸ್ತಿ : ಮಾಸ್ತಿ ತೆಲುಗಿನ ಸೆರಗಿನ ಊರು ಎಷ್ಟೋ ಅಷ್ಟೇ ದಿಟವಾಗಿ ಕನ್ನಡದ ಸೆರಗು, ತಮಿಳು ಸೆರಗಿನ, ಊರು ಅದು. ಅಂದರೆ ನಿಜವಾಗಿ ಕನ್ನಡದ ಗ್ರಾಮ ಅದು. ಮಾಸ್ತಿ, ಕನ್ನಡದ ಗ್ರಾಮ.

ವಿ. ಸೀ : ಸಣ್ಣ ಕತೆಗೆ ನಿಮಗುಂಟಾದ ಒಲವಿಗೆ ಕಾರಣವೇನು ?

ಮಾಸ್ತಿ : ಇಂಗ್ಲೀಷಿನಲ್ಲಿ ಡಿಕಿನ್ಸ್ ಕೃತಿಗಳನ್ನು ಓದೋಕೆ ಪ್ರಾರಂಭಿಸಿದ ದಿನಗಳಲ್ಲಿ ಸಣ್ಣ ಕತೆಗಳು ಕಣ್ಣಿಗೆ ಬಿದ್ದವು; ಚೆನ್ನಾಗಿ ಕಂಡವು. ಆಗ, ಬಿ.ಎ ಕ್ಲಾಸಿನಲ್ಲಿದ್ದಾಗ ಈ StrandMagazine ನೋಡಿದೆ ಅದರಲ್ಲಿ ಕತೆಗಳು ಅನೇಕವಾಗಿ....ಕತೆಗಳು ಬರೋವು ಆಗಿನ ದಿವಸಕ್ಕೆ ನಮ್ಮ ಜನಕ್ಕೂ ಇಂಥ ಕತೆಗಳಿದ್ದರೆ ಚೆನ್ನಾಗಿದೀತಲ್ಲ ಅಂತ ಅನ್ನಿಸ್ತುನನಗೆ. ಆದರಿಂದ ಒಲವು........

ವಿ. ಸೀ : ಈಗ....ಸುಬ್ಬಣ್ಣನಂಥಾ ನೀಳ್ಗತೆಗೂ ತಾವೇ ಬರೆದಿರೋ ಕಾದಂಬರಿಗಳೊಂದೆರಡಿವೆಯಲ್ಲ ಇವಕ್ಕೂ ವ್ಯತ್ಯಾಸ ಮಾಡಬೇಕಾದರೆ ಸುಮಾರು ಯಾವ ವ್ಯತ್ಯಾಸ ಹೇಳಬಹುದು ?

ಮಾಸ್ತಿ : ವ್ಯತ್ಯಾಸ.... ವಸ್ತುದೃಷ್ಟಿಯಿಂದ ಇಟ್ಟುಕೊಂಡರೆ ಅದರ ವಿಸ್ತಾರವೇ ಒಂದು....ಬೇರೆಯಾಗ್ತದಲ್ಲ. ನೀಳ್ಗತೆ ಅಂತನ್ನೋದು....ಸುಬ್ಬಣ್ಣ





ಅಂತನ್ನೋದು ಒಂದು ಚರಿತ್ರೆಯನ್ನು ಹೇಳ್ತದೆ; ಒಬ್ಬನ ಚರಿತ್ರೆಯನ್ನು ಹೇಳ್ತದೆ. ಮಿಕ್ಕದ್ದೆಲ್ಲ ಅದಕ್ಕೆ ಸುತ್ತಲೂ ಬರತಕ್ಕಂತಹ ಮೂರ್ತಿ ಎಷ್ಟೋ ಅಷ್ಟೇ ಹೊರತು ಮುಖ್ಯ ಮೂರ್ತಿ ಅಲ್ಲಿ ಸುಬ್ಬಣ್ಣ. ಜೊತೆಗೆ ಈಗ....ಹೆಂಡತಿಯಾದ ಲಲಿತ ಕೂಡ ಅವನ ಜೊತೆಗೆ ನಿಲ್ಲ ತಕ್ಕಂತಹ ಒಂದು ಮೂರ್ತಿಯೇ ಹೊರತಾಗಿ ಈ ಹೆಸರಿನ ಮೂರ್ತಿ ಇಷ್ಟುದ್ದ ಆಗಬೇಕು ಅಂತ ಉದ್ದೇಶ ಅಲ್ಲ. ಮಿಕ್ಕವರೆಲ್ಲ ಜೊತೆಗೆ ಬರತಕ್ಕಂತಹವರು. ಈ ಚೆನ್ನಬಸವನಾಯಕ ಅಂಥ ಕಾದಂಬರಿಯನ್ನು ತಗೊಂಡರೆ....ನೂರು ಸಂಗತಿ ಬರುತ್ತೆ....ನೂರು ಮನುಷ್ಯರು ಬರ್ತಾರೆ. ಬೇರೆ ಬೇರೆ ಜನ ಬರ್ತಾರೆ. ಅನೇಕ ಹೆಸರುಗಳು....

ವಿ. ಸೀ : ಸಣ್ಣ ಕಥೆಯಲ್ಲಿ ಇಂಥದನ್ನೇ ಒಂದು ವಿಷಯ ತಕೊಂಡಿದ್ದರೆ ಅದಕ್ಕೂ ಸುಬ್ಬಣ್ಣನಿಗೂ ಏನು ವ್ಯತ್ಯಾಸ ತೋರುತ್ತೆ ?

ಮಾಸ್ತಿ : ಸಣ್ಣ ಕತೆಯೊಳಗೆ....ಒಂದು ಸಣ್ಣ ಕತೆ ಅಂತನ್ನೊ ಕತೆಯೊಳಗೆ ನೀವು ಚೆನ್ನಬಸವನಾಯಕದ ಕತೆಯನ್ನು ಹೇಳೋಕಾಗೋದಿಲ್ಲ.

ವಿ. ಸೀ : ಸುಬ್ಬಣ್ಣನ ಕತೆ ಹೇಳಿ....

ಮಾಸ್ತಿ : ಸುಬ್ಬಣನ ಕತೆಯನ್ನ ಹೇಳಬೇಕಾದರೆ... ಸಣ್ಣ ಕತೆಯಾಗಿ ಹೇಳಬೇಕಾದರೆ ಅದರಲ್ಲಿ ಒಂದೂ....ಹತ್ತು....ಎಂಟರಲ್ಲಿ ಒಂದು ಭಾಗ ಬರಬಹುದು ಅಷ್ಟೇ ಹೊರತಾಗಿ ಮಿಕ್ಕಿದ್ದೆಲ್ಲ ಬಿಡಬೇಕಾಗುತ್ತದೆ. ಅದರಲ್ಲಿ ಅನೇಕ ವಿಚಾರ ಬರುತ್ತೆ ಅನೇಕ....ಯಾರು .. ಹ್ಯಾಗೆ ಹೇಳಬಹುದು ನಾವೂ ಈಗ ಗಂಡ ಹೆಂಡತಿ ಅವರು ಮಾತ್ನ....ಇದು ಮಾಡಿದರೂ.... ಎಷ್ಟೆಷ್ಟು ಹೇಳಿಕೊಂಡರು ಒಬ್ಬರಿಗೊಬ್ಬರು ಅಂತನ್ನೋದು ನಾಲ್ಕೈದು ಸಲ ಈ ಗಂಡ ಹೆಂಡತಿ ಮಾತ್ನಾಡಿದ್ದು ಬರ್ತದೆ ಅಷ್ಟೆಲ್ಲಾ ಬರೋಕಾಗೋದಿಲ್ಲ....

ವಿ. ಸೀ. : ಒಂದು ಏಕ ಸೂತ್ರ ಸಾಧಿಸೋಕಾಗೋದಿಲ್ಲ.

ಮಾಸ್ತಿ : ಅಥವಾ ಅದು ಬರಬಹುದು, ಮಿಕ್ಕಿದ್ದೆಲ್ಲ ಬಿಟ್ಹೋಗುತ್ತೆ....ಮಿಕ್ಕದ್ದ್ಯಾವುದೋ ಬರುತ್ತೆ, ಇದು ಬಿಟ್ಹೋಗುತ್ತೆ. ಅಂದರೆ ಸಣ್ಣಕತೆ ಒಳಗೆ ಎಲ್ಲ ಒಟ್ಟಿಗೆ ಒಂದು ಗಟ್ಟಿಯಾಗ ಬೇಕಾಗುತ್ತೆ. ಕಾದಂಬರೀಲಿ ಗಟ್ಟಿಯಾಗೋದಿಲ್ಲ....

ವಿ. ಸೀ : ಆಗೋದಿಲ್ಲ....

ಮಾಸ್ತಿ : ಆಗೋದಿಲ್ಲ....

ವಿ. ಸೀ : ತಾವು ಕನ್ನಡದಲ್ಲಿ ಬರೆಯ ತೊಡಗುವಾಗ ನಮ್ಮ ಗದ್ಯ ಪದ್ಯ ಕೃತಿಗಳ ಸ್ವರೂಪ ಯಾವುದಿತ್ತು ?

ಮಾಸ್ತಿ : ಯಾವುದೂ....ನಮಗೆ ಗದ್ಯ ಅಂತನ್ನೋದಕ್ಕೆ ಬಹಳ ಒಳ್ಳೇ ಉದಾಹರಣೆ ಇದ್ದದ್ದು ನಮ್ಮ ವಾಸುದೇವಯ್ಯನವರ ಆರ್ಯಕೀರ್ತಿ, ಶಿವಾಜಿ ಕತೆಗಳು. ಆ....ಪದ್ಯ ಅಂತನ್ನೋದು ನಾವು ನೋಡಿದ ಹಾಗೆ; ನಾನು ನೋಡಿದ ಹಾಗೆ ನಮ್ಮ ನರಸಿಂಹಾಚಾರ್ಯರದು ಬಹಳ ಒಳ್ಳೇ ಕನ್ನಡ, ಸುಂದರವಾದ ಕನ್ನಡ ಹಳೇ ಮಾದರಿಯವು. ಗದ್ಯವೂ ಒಂದು What do you call it classic ಬಹಳ ಚೆನ್ನಾದ ಬರವಣಿಗೆ. ಆದರೆ ಹೊಸ ಕಾಲದ ಬರವಣಿಗೆಯ ಲಕ್ಷಣ....ಯಾವುದು ಹೊಸದು ಅಂತ ಹೇಳ್ತೀರೊ ನೀವೂss....ನೀವು ನಾವೂ ಹೇಳ್ತೀವೊ ಅದು ಆಗೋದಿಲ್ಲ ಇದು ಬಹಳ ಗಂಭೀರವಾದ ಬರವಣಿಗೆ.

ವಿ, ಸೀ : ನೀವು ಮೊದಲು ಬರೆದ ಕತೆ ಯಾವುದು ?

ಮಾಸ್ತಿ : ನಾನು ಮೊದಲು ಯಾವುದು....ಕನ್ನಡದಲ್ಲಿ ಬರೆದದ್ದೂ....ಇಂಗ್ಲೀಷ ನಲ್ಲಿ ಬರೆದೆ ಮೊದಲಲ್ಲಿ. ಪದ್ಯವೂ ಅಷ್ಟೆ ಗದ್ಯವೂ ಅಷ್ಟೇ....

ವಿ. ಸೀ : ಅನೇಕರು ಹಾಗೇ ಕಾಣುತ್ತೆ....ಹ....ಹ....

ಮಾಸ್ತಿ : ಇದರಲ್ಲಿ Matriculation F. A. Class ನಲ್ಲಿದ್ದೆ ಮೈಸೂರಿನಲ್ಲಿ.... ಆ ಇಂಗ್ಲೀಷಿನಲ್ಲಿ. ಮಲ್ಲಪ್ಪನವರ....ಅಕ್ಕಿ ಅಂಗಡಿ ಮಲ್ಲಪ್ಪನವರ ಅಂಗಡಿಯೊಂದಿರತಾ ಇತ್ತು. ಅಕ್ಕಿ ಅಲ್ಲಿ ತಗೊಳ್ದೆ ಇದ್ರೂನೂ ಅಲ್ಲಿ ಹೋಗಿ ಕೂತಿರುವೆ, ಅಲ್ಲಿ ಯಾರ್‍ಯಾರೋ ಮುದುಕರು ಬಂದು ಕೂತು ಕೊಳ್ಳೋರು ಅವರು ಹೇಳೋ ಕೃತಿಗಳು....ಅದನ್ನೆಲ್ಲಾ ಕೇಳೋದು ಅಲ್ಲಿ ನಾನು. ನಮ್ಮ ಕೃಷ್ಣರಾಜ ಒಡೆಯರ ಕತೆಗಳು, ಅವರ ದಿವಸದ ಕತೆಗಳು ಆಗಿನ ಹಳೇ ಕತೆಗಳೆಲ್ಲಾ ಬರೋವು ಅಲ್ಲಿ. ಅಂಥಾ ಕತೆಗಳು.... ಅಂಥಾದ್ದರಲ್ಲಿ ಒಂದೆರಡು ಕತೆಗಳನ್ನ ಇಂಗ್ಲೀಷಿನಲ್ಲಿ ಬರೀ ಬೇಕೂಂತ ಹಾರೈಸ್ತಿದ್ದೆ ನಾನಲ್ಲಿ ಇಂಗ್ಲೀಷಿನಲ್ಲಿ ಬರೀ ಬೇಕೂಂತ ಯೋಚನೆ ಮಾಡಿಕೊಂಡು ಹಾರೈಸ್ತಿದ್ದೆ. ಪದ್ಯಾನೂ....ನಾನು....

ವಿ. ಸೀ. : ಕನ್ನಡದ ಕತೆ ಯಾವುದು ?

ಮಾಸ್ತಿ : ಕನ್ನಡದ ಕತೆ ನಾನು ಮೊದಲು ಬರೆದಿದ್ದು ಅಂತನ್ನೋದು ಕೃಷ್ಣ ಕುಮಾರಿ ಕತೆ ಒಂದು. ಕೃಷ್ಣಕುಮಾರಿಯನ್ನು ಕುರಿತು ಒಂದು ದೊಡ್ಡ ಇತಿಹಾಸ ಕಾದಂಬರಿ ಬರೀ ಬೇಕೂಂತ ಆರಂಭಿಸಿಬಿಟ್ಟೆ ನಾನು. ಅದು ಬಿ. ಎ. ಕ್ಲಾಸಿನಲ್ಲಿದ್ದಾಗ. ಆದರೆ ನಡೀಲಿಲ್ಲ ಅಲ್ಲಿಗೇ ನಿಂತೋಯ್ತುದು ಒಂದು ನಾಲ್ಕೋ ಐದೋ ಅಧ್ಯಾಯ ಬರೆದು ನಿಲ್ಲಿಸಿ ಬಿಟ್ಟೆ ಅದ್ನ ನಾನು

ವಿ. ಸೀ : ಸಣ್ಣ ಕತೆ?

ಮಾಸ್ತಿ : ಸಣ್ಣ ಕತೆ ಮೊದಲು ಅಂತನ್ನೋದು ನನ್ನ ರಂಗನ ಮದುವೆ....ಹ....ಹ

ವಿ. ಸೀ ; ....ಮೊದಲನೆ ಕವನ ಯಾವುದು ?

ಮಾಸ್ತಿ : ಮೊದಲನೆ ಕವನ ಇದೂ.... ನನ್ನ ಬಿನ್ನಹದ ಗೀತೆಗಳು.

ವಿ. ಸೀ : ಬಿನ್ನಹದ ಗೀತೆಗಳನ್ನ ಬರೆಯುವಾಗ ನಮ್ಮ ದಾಸರ ಪದಗಳು ಮುಂತಾದವು ಇದರ ಮೇಲೆ ಪ್ರಭಾವ ಬೀರಿದವ ?

ಮಾಸ್ತಿ : ಓಹೋ....ಓಹೋ....ಕ್ರಮ ಅದೇನೆ, ಅದೇ ಕ್ರಮ ಪುರಂದರದಾಸರ ಕೀರ್ತನೆಗಳನ್ನ ಹಾಡ್ತಿದ್ದೆ ನಾನು ಹಳ್ಳೀಲಿದ್ದಾಗ ಹಳ್ಳೀಲಿ ಹಾಡೂ ಕಲಿತಿದ್ದೆ, ಹಾಡ್ತಾ ಇದ್ದೆ ಅದರ ನೆನಪಿನ ಮೇಲೆ ಅವರು ಭಕ್ತಿ ಮಾತ್ರ ಹೇಳಿದರು ನಾವು ನಮ್ಮ ಅನುಭವವನ್ನು ಕೂಡ ಹೇಳಬಹುದಲ್ಲ. ಇಂಗ್ಲಿಷಿನ ಗೀತೆಗಳಲ್ಲಿ....ಭಾವಗೀತೆಗಳಲ್ಲಿ ಇರೋ ಹಾಗೆ, Lyric ನಲ್ಲಿ ಇರೋ ಹಾಗೆ ನಮ್ಮ ಅನುಭವವನ್ನ ಹೇಳಬಹುದಲ್ಲ ಅಂತ ಅಂದ್ಕೊಂಡು ವರ್ಣನೆಗಳನ್ನ ಕೂಡ ಇಲ್ಲಿ ತಂದಿದೀನಿ ಇದರಲ್ಲಿ.

ವಿ. ಸೀ : ಅಂದರೆ ಏನಾಯಿತು ಅವರು ಒಂದು ಪಲ್ಲವಿ, ಅನುಪಲ್ಲವಿ, ಒಂದು ಚರಣ ಹೇಳಿ ಮುಗಿಸಬಹುದಾದ್ದನ್ನ ನೀವು ಬಿಟ್ಟು ಬೆಳಸಿದ್ದೀರಿ ಅಂತ ಹೇಳಬಹುದೇ ?

ಮಾಸ್ತಿ : ಇಲ್ಲ, ಅದರ ಹಾಗೇನೆ ನಾನು ಮೂರು ಮೂರು; ಸುಮಾರು ಮೂರು ನುಡಿ ಇದ್ದೇ ಇರ್ತದೆ. ಸುಮಾರು ಒಂದು ಪಲ್ಲವಿ, ಅನುಪಲ್ಲವಿ, ಆದರಲ್ಲಿ ಬರೀ ಪಲ್ಲವಿ ಮೂರು ನುಡಿ ಸಾಮಾನ್ಯವಾಗಿ ಮೂರು ಕೆಲವು ವೇಳೆ ನಾಲ್ಕು, ಕೆಲವು ವೇಳೆ ಐದಿರಬಹುದು.

ವಿ. ಸೀ : ನುಡಿಗಳ ಸಂಖ್ಯೆ ಅಲ್ಲ ವಿಷಯವೇನಾದರೂ ಬೆಳೀತೇ ಹೇಗೆ ?

ಮಾಸ್ತಿ : ಹೌದು, ಹೌದು ವಿಷಯ.... ನಮ್ಮ ದಾಸರು ಒಂದು ಭಕ್ತಿಗೀತೆ ತಗೊಂಡು ಒಂದು ಮಾತ್ರ ಹೇಳೋರು ನೀನ್ಯಾಕೋ., ನಿನ್ನ ಹಂಗ್ಯಾಕೋ ಅಂತನ್ನೋರು ಅವರು. ಅದಕ್ಕೆ ಉದಾಹರಣೆ ಒಂದೆರಡು ಮೂರು ನುಡಿ ಕೊಡೋರು. ನಾನು....ಒಂದು ...ಇದನ್ನ ವರ್ಣನೆ ಮಾಡಬೇಕೆಂದು ಒಂದು ಬೆಡಗಿನ ವರ್ಣನೆ ಏನು ಮೋಹ ಏನು ಮಾಯ ಅಂತ ಆರಂಭಿಸಿದರೆ ಏನು ಚೆನ್ನಾಗಿರುತ್ತೆ ಅಂತ ಹೇಳಿಬಿಟ್ಟು ವಿವರಗಳನ್ನೆಲ್ಲಾ ಕೊಡ್ತಾ ಬರ್ತೇನೆ ಒಂದು ಮೂರು ನುಡಿ ಒಳಗೆ ಬೇರೆ ಬೇರೆ ವಿವರ ಬರುತ್ತವೆ.

ವಿ. ಸೀ : ಒಂದು ಈಚಿನ ಕಾಲದ ಒಂದು ಭಾವಗೀತೆಯ ಹಾಗೆ ಒಂದು ಸ್ವರೂಪ ತಂದಿರಿ ಅಂತ ಹೇಳಬಹುದು.

ಮಾಸ್ತಿ : ಹೌದು ....ಹೌದು.

ವಿ. ಸೀ : ಸರಳರಗಳೆಯ ಯಾವ ಗುಣ ನಿಮ್ಮ ಮನಸ್ಸಿಗೆ ಹಿಡಿಸಿ ಅದರಲ್ಲಿ ಬರೆಯುವ ಹಾಗೆ ಮಾಡಿತು ?

ಮಾಸ್ತಿ : ಸರಳ ರಗಳೆ ನಾವು ಅಂತ ಈಗ ಕರೀತಿರೋದು ನಾನು ಬರೆದ ದಿವಸಕ್ಕೆ ಕನ್ನಡದಲ್ಲಿ ಹೊಸದಾಗಿ ಬಂದ ಸಂಗತಿ. ಅದು Blankverse ನೋಡಿ ಕೊಂಡು ಇದನ್ನ ಬರೆದೆ ನಾನು. ಇದನ್ನ ನಾನು ಸರಳ ರಗಳೆ ಅಂತ ಕರೀಲಿಲ್ಲ, ಅದನ್ನ ನಮ್ಮ ವೆಂಕಣ್ಣಯ್ಯನವರು ಕರೆದರು. ಅದಕ್ಕೆ.... ಅದನ್ನ ಹಾಗಂತ ಕರೆದರವರು. ವೆಂಕಣ್ಣಯ್ಯನವರು, ಇವರಿಗೇನು ತೋರಿತು ಈ ರಗಳೆ ಅಂತನ್ನೋದು ಇದೆಯಲ್ಲ ಅದೇ ಹೆಸರು ಇದ್ದು ಕೊಳ್ಳಿ ಇದಕ್ಕೆ ಹೊಸ ಹೆಸರು ಯಾಕೆ ಸೃಷ್ಟಿ ಮಾಡೋದು; ಸರಿ ನೇರವಾಗಿ ಹೋಗುತ್ತೆ, ಅದರಿಂದ ಸರಳ ಅಂತನ್ನೋ ಶಬ್ದ ಇರಲಿ ಅಂತ ಹಾಕಿಬಿಟ್ರು ಅವರು ಅಂತ ಅನ್ನಿಸ್ತಾ ಇದೆ ನನಗೆ. ಈ....ನನಗೆ ಸರಳ ರಗಳೆ ಅಂತ ಇರೋದು ಅದನ್ನ ಒಪ್ಕೊಂಬಿಟ್ಟಿದ್ದೀನಿ ನಾನೀಗ, ಅಂದ್ರೆ ಅದರ ಗುಣ ಯಾವುದು ಅಂತಂದ್ರೆ Blank-Verse ನ ಗುಣ. Blank Verse ನ ಗುಣ ಯಾವುದು ಅಂತಂದ್ರೆ ಪದ್ಯಕ್ಕೆ ಇರಬೇಕಾದ ಒಂದು ನಿಯಮವನ್ನಿಟ್ಟುಕೊಂಡು ಗದ್ಯದಲ್ಲಿ ಮಾತ್ರ ಸಾಧ್ಯವಾದ ಒಂದು ನೇರವಾದ ನಡೆ ಯಾವ ಹೊತ್ತಿಗೆ ಯಾವ ಬಳುಕು ಯಾವ ಇದು ಬೇಕಾದ್ರೂ ಅದನ್ನ ಸಾಧಿಸಬಲ್ಲುದು ಅದು. ಆ ಶಕ್ತಿ ಇರೋದು ಇಂಗ್ಲಿಷಿನಲ್ಲಿ ಕೂಡ ಒಂದೇ ಒಂದು. ಇದಕ್ಕೆ Blank Verse ಅನ್ನೋ ದಕ್ಕೆ ಒಂದೇ ಒಂದಕ್ಕೆ ಇರೋದು ಮಿಕ್ಕಿದ ಯಾವುದಕ್ಕೂ ಬರೋದಿಲ್ಲ ಈಚೆಗೆ ಇವರು ಹೇಳ್ತಾರೆ Free verse ಅದು....ಇದು ಅಂತಂದ್ಬಿಟ್ಟು. ಇವರು....ಶಬ್ದಗಳು ಬೇಕಾದಷ್ಟು ಇವರು ಮಾಡಿಕೊಂಡಿರಬಹುದು ಒಳ್ಳೆ Blank verse ನಲ್ಲಿ ಬರುವ ಆ ಬಳುಕು ಈ Free verse ನಲ್ಲಿ ಕೂಡ ಬರೋದಿಲ್ಲ.

ವಿ. ಸೀ : ಎಷ್ಟು ವಿವಿಧತೆ ಆದ್ರೆ ಅಷ್ಟು ವಿವಿಧತೆ ಸಾಧಿಸಬಹುದು ಅಂತ ಕಾಣ್ತದೆ.

ಮಾಸ್ತಿ : ಹೌದು ಹೌದು, ಪದ್ಯದಲ್ಲಿರುವ ನಿಯಮ ಇದೆ. ಗದ್ಯದಲ್ಲಿರುವ ನೇರ ಇದೆ....

ವಿ. ಸೀ : ನೇರ ಇದೆ....

ಮಾಸ್ತಿ : ಈ ಎರಡೂ ಸೇರಿ ಮಾಡ್ಬೇಕು ಅಂತಂದ್ರೆ Blank verse ಹೊರ ತಾಗಿ ಇನ್ನು ಇಂಗ್ಲೀಷಿನಲ್ಲಿ ಕೂಡ ಇವತ್ತು ಇನ್ನೊಂದಂತಾದ್ದಿಲ್ಲ ಅಲ್ಲಿ.

ವಿ. ಸೀ: ಈಗ ಅನೇಕ ಕವಿತೆಗಳನ್ನ ಹಾಡಿ, ಈ ಹಾಡಿನಿಂದ ಇದಕ್ಕೆ ಕವಿತೆ ಕೆಡುತ್ತೆ ಅಂತ ಹೇಳ್ತಾರೆ. ಅದಕ್ಕೇ ಕವಿತೆಗಳನ್ನು ಹಾಡೋದಕ್ಕಾಗೋದಿಲ್ಲ ಇದರ ವಿಚಾರದಲ್ಲಿ ನಿಮ್ಮ ಅಭಿಪ್ರಾಯ ಏನು ?

ಮಾಸ್ತಿ : ಹಾಡು....ಹಾಡು ಅಂತನ್ನೋದು, ಕವಿತೆಯನ್ನ ಹಾಡೋದು ಅಂತ ನ್ನೋದು ನಮ್ಮ ಹಿನ್ನೆಲೆ. ಎಲ್ಲಿ ಬೇರೆ ಕಡೆ ನಾನು ಕೇಳಿದ್ದಿಲ್ಲ ನನಗೆ...

ವಿ. ಸೀ : ಅದಕ್ಕೇ ಬೇರೆ ಬರೀತಾರೆ ಅವರು, ಹಾದು ಬರೀತಾರೆ

ಮಾಸ್ತಿ : ಹಾಡು ಅಂತ ಬರೀತಾರೆ, ಹಾಡು ಅಂತ ಹಾಡತಾರೆ Hymns ಅಂತ ಹೇಳ್ತಾರೆ ನಮ್ಮ ಇವರು. ಈ ಕ್ರೈಸ್ತ ಚರ್ಚ್‌ನಲ್ಲಿ Hymns ಅಂತ. ಅದನ್ನ ಹಾಡ್ತಾರೆ ಅವರು. ಅಂದರೆ ಹಾಡು ಅಂತಲೇ, ಹಾಡಿ ಗೋಸ್ಕರ ಅಂತಲೇ ಬರೆದದ್ದು ಅದು. ಅದು ಪದ್ಯ ಅಂತ ಬರೆದದ್ದಲ್ಲ ಅದು ಹಾಡ್ಬೇಕು ಅಂತ್ಲೇ ಬರೆದದ್ದು ನಮ್ಮಲ್ಲಿ ಎಂಥಾ ಸಾಮಾನ್ಯ ಇದನ್ನ ಕೂಡ ಪದ್ಯವಾಗಿ ಪದ್ಯದ ಒಂದು ಗೀತೆಯಿಟ್ಟು ಹಾಡ್ತಾ ಇದ್ರು ನಮ್ಮಲ್ಲಿ. ನಾನು ಕೇಳಿದ ಹಾಗೆ ಜೈಮಿನಿ ಭಾರತ, ಕುಮಾರ ವ್ಯಾಸ ಭಾರತ ಇದು ಚಿಕ್ಕಂದಿನಿಂದಲೂ ನಾನು ಕೇಳಿದ್ದು ಹಾಡಿದ ಹಾಗೆ ಕೇಳಿದ್ದೇನೆ ಹೊರತಾಗಿ ಹಾಡದೆ ನೇರವಾಗಿ ಓದಿದ್ದನ್ನು ನಾನು ಕೇಳಿದ್ದಿಲ್ಲ

ವಿ. ಸೀ : ಈಗಿನ ಸಾನೆಟ್ಟನ್ನ ಹಾಡಬಹುದೇ ?

ಮಾಸ್ತಿ : ನಮ್ಮ ಹೊಸ ಕಾಲದ ಕವಿತೆಯೊಳಗೆ ಕೆಲವು ವಾಚ್ಯ ಕೆಲವು ಗೇಯ ಅಂತ ಬೇರೆ ಮಾಡ್ಬೇಕು ನಾವು.

ವಿ. ಸೀ : ಮಾಡ್ಬೇಕಾಗುತ್ತೆ.

ಮಾಸ್ತಿ : ಮಾಡ್ಬೇಕಾಗುತ್ತೆ, ವಾಚ್ಯ, ಗೇಯ ಇವು, ಇದು ಈ ಬೇಧ ನಮ್ಮ ರಾಮಾಯಣದಲ್ಲಿ ಕಾಣುತ್ತೆ ನೋಡಿ ನಮಗೆ, ತಾವು ಓದಿರಬಹುದು ಅದನ್ನ ಪಾಠ್ಯೇಗೇಯೇಚ ಅಂತ ಕರೀತಾರೆ ಪಾಠ್ಯ ಒಂದು ಗೇಯ ಒಂದು ಎರಡು ಬೇರೆ ಅದರಲ್ಲಿ ಉಕ್ತವಾಗಿದೆ. ಎರಡು ಜಾತಿ ಅದರಲ್ಲಿ ಬಂದಿದೆ ರಾಮಾಯಣದಲ್ಲಿ. ಆದ್ದರಿಂದ ಗೇಯವಾಗಿರುವಂಥಾದ್ದು ಕೆಲವು ಕವಿತೆ, ಪಾಠ್ಯವಾದಂಥಾವು ಕೆಲವು ಕವಿತೆ. ಕೆಲವು ಜಾತಿ ಕವಿತೆ,

ವಿ. ಸೀ : ಕತೆ ಬರೆಯುವಾಗ ಬರೀ ಕತೆ ಕಡೆ ನಿಮ್ಮ ದೃಷ್ಟಿಯೋ ? ಅದರಲ್ಲಿ ಇನ್ನ್ಯಾವುದಾದರೂ ಗುಣ ಮುಖ್ಯವಾಗಿ ಕಂಡಿದೆಯೋ ?

ಮಾಸ್ತಿ : ನಾನು....ಕಥೆ ಅಂತನ್ನೋದು ಏನಾದರೂ ಒಂದುಚಿತ್ರ ಕೊಡೋಣ ಅಂತ ಕೂತ್ಕೋತೇನೆ ನಾನು. ಮೊದಲೂ ಅಷ್ಟೆ ಇವತ್ತೂ ಅಷ್ಟೇ. ರಂಗನ ಮದುವೆಯಿಂದ ತಗೊಂಡು ಇವತ್ತಿನ ದಿವಸ ಮೊನ್ನೆ ನಮ್ಮ Tolstoy

ಅವರ ವಿಷಯ 'ಭೂರ್ಜ ವೃಕ್ಷ' ಅಂತ ಬರಿದಿದ್ದೇನಲ್ಲ, ಏನ್ ಸಂಗತಿ ಅಂದ್ರೆ ಪಾಪ ಟಾಲ್‌ಸ್ಟಾಯ್ ಜೀವನದಲ್ಲಿ ನಡೆದ ಒಂದು ಸಂಗತಿ ಯನ್ನು ಬರೀಬೇಕೂಂತ ಕೂತ್ಕೋತೇನೆ ಅಥವಾ ರಂಗನ....ರಂಗ ಹುಡುಗ ಮದುವೆಯಾದ ಸಂದರ್ಭ ಏನು ಅಂತನ್ನೋದನ್ನ ಬರೀ ಬೇಕೂಂತ, ಒಂದು ಚಿತ್ರ ಕೊಡೋ ಉದ್ದೇಶ ನನಗೆ. ಕತೆ ಹೇಳೋದು ಉದ್ದೇಶವೋ, ಮತ್ತೇನಾದರೂ ಉದ್ದೇಶವೋ ನನಗೆ ಆ ಹೊತ್ತಿನಲ್ಲಿ ಆ ಯೋಚನೆ ಇರೋದಿಲ್ಲ. ನನಗೆ ಜೀವನದ ಒಂದು ಚಿತ್ರವನ್ನು ಕೊಡಬೇಕು ಅಂತ ಕೂತ್ಕೊಂಡಾಗ ಏನೇನು ಹೇಳಬೇಕೋ ಅದನ್ನ ಹೇಳ್ಕೊಂಡು ಹೋಗ್ಬಿಡ್ತೇನೆ ನಾನು.

ವಿ. ಸೀ ಈಗ ಎರಡು ಕತೆಗಳನ್ನ ನಾನು ನಿಮ್ಮನ್ನ... ಒಂದು ಕವನದ ಕತೆ ಇನ್ನೊಂದು....ಇನ್ನೊಂದು ಅಂತಿಟ್ಕೊಳ್ಳಿ ಗೌಡ್ರ ಮಲ್ಲಿ ಕತೆ ಒಂದು ಅಪರಂಜಿ ಆರಿಗೆ ಕತೆ ಒಂದು. ಬಹಳ ಚೆನ್ನಾಗಿದೆ ಇದು, ಒಂದು ಆಕ್ಷೇಪಣೆ ಬಂದಿದೆ ಕೆಲವು ಸಮಯದಲ್ಲಿ ಅವನ್ನ ತಮಗೆ ಹೇಳಬಾರದು ಆದರೂ ಇಲ್ಲಿ ಕೇಳ್ಬೇಕು ತಮ್ಮನ್ನ, ಮಲ್ಲೀಗೆ ಒಂದು ಮಗೂ ಆಯ್ತು ....ಮಗು ಸತ್ತೋಯ್ತು ಅಂತಂದು ಹೇಳಿದ್ದೀರಿ ಆ ಮಗು ಬದುಕಿದ್ರೆ ಏನಾದ್ರೂ ತೊಂದರೆ ಆಗ್ತಿತ್ತೆ ಅಲ್ಲಿ ?

ಮಾಸ್ತಿ : ಏನಿಲ್ವಲ್ಲ, ಪಾಪ ನಮ್ಮ ಹಿಂದಿನ ಜೀವನವನ್ನು ಬಲ್ಲವರಿಗೆ ಏನು ತೊಂದರೆ ಆಗ್ತ ಇರಲಿಲ್ಲ ಅನ್ನೋದು ಗೊತ್ತೇ ಇದೆ. ಈ ನಮ್ಮ ಗ್ರಾಮಗಳಲ್ಲಿ, ಈ ನಮ್ಮ ಮಲ್ಲಿ ಇದ್ದ ಹಾಗೆ ಇದ್ದ ಹೆಣ್ಣು ಮಕ್ಕಳು ಸುಖವಾಗಿ ಜೀವಿಸಿದ್ದಾರೆ ಬಾಳಿದ್ದಾರೆ ಸಮಾಜದಲ್ಲಿ, ಅವರಿಗೆ ಯಾವುದು ಕೆಡುಕೆನಿಸೋದು ಏನಿರಲಿಲ್ವಲ್ಲ.

ವಿ. ಸೀ : ಆದ್ದರಿಂದ ಧರ್ಮ ಸಮಾಜ ಇದಕ್ಕೋಸ್ಕರ ಏನಾದರು ಮನಸ್ಸಿಗೆ ಬೇಸರ ಪಟ್ಟು ಕೊಂಡ್ಬಿಟ್ಟದ್ರಿಂದ ಆಕೆಗೆ ಆ ಮಗೂ ಇಲ್ದೀರ ಮಾಡಿ ಬಿಟ್ರು ಅಂತನ್ನೋದು ತಪ್ಪಾಗುತ್ತೆ ಹೇಳೋದು.

ಮಾಸ್ತಿ : ನಾನೇ .... ಮಾರಾಯ (ನಗು) ನನಗೇ ಮಲ್ಲಿ ನನ್ನ ಮಗಳ ಹಾಗೆ (ನಗು) ಅವಳು ಹೆತ್ತ ಮಗು ನನ್ನ ಮೊಮ್ಮಗಳು ಅವಳು (ನಗು)

ವಿ. ಸೀ : ಸಂತೋಷ....ಸಂತೋಷ....

ಮಾಸ್ತಿ : (ನಗು)

ವಿ. ಸೀ : ಅಪರಂಜಿ ಆರಿಗೆ ಕತೇನಲ್ಲಿ ಇವರು ಸಿಕ್ಕೊಂಡ್ರು, ಎಲ್ರಿಗೂ ಗೊತ್ತಾಯಿತು ಈ ಸಮಾಚಾರ ಆರಿಗ ಬುಸುಗುಟ್ಟುತ್ತ ಹೊರಟೋದ ಕೋಪ

ಮಾಡಿಕೊಂಡು ತಾನು. ಪತ್ತೆ ಆಗೋಯ್ತಲ್ಲ ಹಾಗೆ ಅಂತ ಈಕೆ ಹೋದಳು. ಪುನಃ ಒಂದು ಬಗೆಯ ಕನ್ನಿಕೆಯಾದ ಹಾಗೆ ಪುನಃ ಹೊಸ ಹೆಣ್ಣಾದ ಹಾಗೆ ವರ್ಣನೆ ಮಾಡಿದ್ದೀರಿ. ಆ ಸಂತೋಷವನ್ನು ವರ್ಣನೆ ಮಾಡಿದ್ದೀರಿ....

ಮಾಸ್ತಿ : ಅದರಲ್ಲೀ ನಾನು ವರ್ಣಿಸಿರುವ ಸಮಾಜದಲ್ಲಿ ಈ ಅಪರಾಧ ಅದರೂನೂ ಅದಕ್ಕೆ....ಈ....ಅದರ ಅವಮಾನ ಇದೆಯಲ್ಲಾ....ಈ ನಮ್ಮ ಹೊಸ ಈಗಿನ ಸಮಾಜದಲ್ಲಿ ಇವೊತ್ತಿನ ದಿವಸ ನಮ್ಮ ಸಮಾಜ ಅಂತ ಯಾವುದು ಹೇಳ್ತೇವೋ ಇದರೊಳಗಿನ ಅವಮಾನ ಅಲ್ಲ, ಅದಕ್ಕೆ ಆ ಸಮಾಜದಲ್ಲಿ ಅದಕ್ಕೆ ಅಷ್ಟು ಅವಮಾನ ಇಲ್ಲ ಅಲ್ಲಿ. ಅವರಲ್ಲಿ ಆ ಹೆಣ್ಣು ಮಗಳಾದವಳು ತಪ್ಪು ಮಾಡಿದಳು ಹೌದು ನಾನು ತಪ್ಪು ಮಾಡಿದೆ ಅಂತಂದು ಹೋಗಿ ಬಿಡ್ತಾಳೆ ಅವಳಿಂದ ತಪ್ಪು ಕಾಣಿಕೆ ತಂದೆಯಿಂದಲೋ ಬಂಧುಗಳಿಂದಲೋ ತಗೊಂಬಿಡ್ತಾರೆ. ಆಮೇಲೆ ಅವಳು ಬಿಡಿಸಿಕೊಂಡು ಬಿಡ್ತಾಳೆ ಆ ಸಂಬಂಧದಿಂದ ಬಿಡಿಸಿಕೊಂಡ್ರು ತಿರುಗಿ ಒಬ್ಬ ಹೆಣ್ಣು ಮಗಳು ಹ್ಯಾಗೆ, ಹೊಸ ಹೆಣ್ಣು ಮಗಳು ಹ್ಯಾಗೋ ಹಾಗೆ, ಹೊಸದು ಹ್ಯಾಗೋ ಹಾಗೆ ಆರಂಭಿಸುತ್ತಾಳೆ. ಜೀವನಾನ ಅವಳು. ಆ ಸಮಾಜದಲ್ಲಿ ಅದುಂಟು ಅಂತ ನನಗೆ ತೋಚಿದ್ದು ಹೇಳಿದ್ದೇನೆ.

ವಿ. ಸಿ. : ಅಥವಾ ಗ್ರೀಕ್ ಮೂಲದಲ್ಲಿ ಸ್ವಲ್ಪ ಹೆಚ್ಚು ಕಡಿಮೆ ಆ ಕತೆ ಹಾಗೆ ಇರೋಣದ್ದರಿಂದ ತಾವು ಈ ರೀತಿ ಮಾಡಿದ್ರೋ ?

ಮಾಸ್ತಿ : ಗ್ರೀಕ್ ಮೂಲ ಯ್ಯಾವುದನ್ನು ವರ್ಣಿಸಿತೋ ಅದು ನಮ್ಮ ಸಮಾಜದ ರೀತಿ ಸಮಾಜ ಅಂತ ನಾನು ಹೇಳ್ತಾ ಇರೋದು ನಮ್ಮ ಸಮಾಜ ಹಿಂದೆ ....ಹಿಂದೆ ನಾವು ಯಾರನ್ನು ಅ ಒಡ್ಡರು ಅಂತ ಹೇಳಿದ್ದೇವೋ ಆ ಸಮಾಜ ಇವತ್ತು ನೀವು ಹೋಗಿ ನೋಡಿದ್ರೂ ಕೂಡ ಗ್ರಾಮ ಗಳಲ್ಲಿ ಈ ಪಟ್ಟದಿಂದ ಬಂದೋರನ್ನ ಒಪ್ಪಿಕೋಬೇಡಿ ನೀವು ಇದೆಲ್ಲ ಹೊಸ ಕಾಲದ ರೀತಿ ನಮಗೆ ಬೇಕಿಲ್ಲ ಈಗ. ಆ ಕಥೆಯನ್ನು ನೀವು ಸರಿಯೋ ತಪ್ಪೋ ಅಂತ ನೋಡಬೇಕಾದ್ರೆ ಗ್ರಾಮದಲ್ಲಿರೋ ಒಡ್ಡರನ್ನ ಹೋಗಿ ನೋಡಬೇಕು, ಸುಖವಾಗಿರ್ತಾರೆ. ಅವ್ರು ಇಂತಾದ ಕ್ಕೆಲ್ಲ ಬಹಳ ಅತೀ ಬೆಲೆ ಕೊಡೋದಿಲ್ಲ ಸುಖವಾಗಿರ್ತಾರೆ. ಸಮಾಧಾನ ವಾಗಿರ್ತಾರೆ , ಸಮಾಧಾನವಾಗಿರ್ತಾರೆ. ಗಂಡನಾದವನೂ ಅಷ್ಟೇ ಅದರ ಹಣೇ ಬರಹ ಅಥವಾ ನನ್ನ ಹಣೇ ಬರಹ ಅಂತ ಬಿಟ್ಬಿಡ್ತಾನೆ ಅದ್ನ .... ಆ ರೀತಿ ಬಿಟ್ಬಿಡ್ತಾನೆ.

ವಿ. ಸಿ. : ಎಷ್ಟು ಚೆನ್ನಾಗಿದೆ ಈ ಥರ ಸಮಾಜವೆಲ್ಲ ಅನ್ನಿಸಿಬಿಡ್ತದೆ.

ಮಾಸ್ತಿ : ಮಾಡಿದರೆ ತುಂಬಾ ಚೆನ್ನಾಗಾದೀತು. ಈ ಗಂಡು ಹೆಣ್ಣು ಅಂತ ಎರಡು ಕೂಡಿಕೆ ಮಾಡಿಕೊಂಡು ಎಲ್ಲರೂ ಪ್ರಾಣ ಬಿಡೋದಕ್ಕೆ ಬದಲಾಗಿ ಆಗೋಲ್ಲಪ್ಪ ಅಂತ ಬಿಡಿಸಿಕೊಳೋದು ಎಷ್ಟೋ ಚೆನ್ನ.

ವಿ. ಸಿ. : ಈ ಸಾಹಿತಿಗೆ, ಸಾಹಿತ್ಯದ ಮಡಿಲಲ್ಲಿ ಬೇರೆ ಏನಾದರೂ ನಿರ್ಬಂಧ ಇದೆಯೇ ? ದೇಶ, ಕಾಲ, ಆದರ, ಭಕ್ತಿ, ವಿಶ್ವಾಸ ಅನ್ನೋದೇನಾದ್ರೂ ?

ಮಾಸ್ತಿ : ವ್ಯಕ್ತಿಯಾಗಿ ಅವನಿಗೆ ಇದ್ದೇ ಇದೆ ದೇಶ ಕಾಲ ಅಂತನ್ನೋದು ಸಾಹಿತಿಯಾಗಿ ಅವನಿಗೆ ಇದ್ದೇ ಇದೆ ದೇಶ, ಕಾಲ ಅಂತನ್ನೊದು ಸಾಹಿತಿಯಾಗಿ ಅವನಿಗೇನಿದೆ ಸಾಹಿತ್ಯ ಬರೀಬೇಕು ತನಗೆ ಸರಿ ಅಂತದ್ದನ್ನು ಹೇಳಬೇಕು ಅವನು. ಅದು ಸರಿ ಅಂತ ತೋರೋದು ಅವನ ಸ್ವಭಾವದ ಮೇಲೆ ಹೋಗುತ್ತೆ.

ವಿ. ಸಿ. : ಒಂದು ದೇಶದ ....ಒಂದು ಸ್ವಾತಂತ್ರ್ಯ ಮಾರೋದಕ್ಕೋಸ್ಕರ ಒಂದು ಬರೀತಾನೆ ಅಂತಿಟ್ಕೊಳ್ಳೋಣ ಆಗ ಯಾವುದೋ ಒಂದಕ್ಕೆ ಒಳಪಟ್ಟು ಅಂತಹ ಸಂದರ್ಭದಲ್ಲಿ ಅದು ಸಾಹಿತ್ಯವಾಗಿ ಚೆನ್ನಾಗಿರುತ್ತ ?

ಮಾಸ್ತಿ : ಸಾಹಿತ್ಯ.... ಅದು ಸಾಹಿತ್ಯ ಆಗೋದೇ ಇಲ್ಲ ಸ್ವಾಮಿ. ಇದು.... ಸಾಹಿತ್ಯ ಅಂತನ್ನೋದರ ಸ್ವರೂಪ ಅಂತ ನಾನು ಯಾವುದು ಒಪ್ಕೊಳ್ತೇನೋ ಅದು ಅವನ ಹೊರಗಿನ ಕಣ್ಣು ಏನನ್ನ ಕಾಣ್ತದೊ ಕಾಣ್ತದೋ ಅದನ್ನ.... ಚಿತ್ರಿಸಬೇಕು ಅದನ್ನ ಹೇಳಬೇಕು ಈ ಒಳಗಿನ ಕಣ್ಣು ಒಂದು ದೇಶದ ಸ್ವಾತಂತ್ರ್ಯವನ್ನು ಮಾರೋದಕ್ಕೆ ಇವನನ್ನ ಪ್ರೇರೇಪಿಸಿತು ಅಂತನ್ನೊ ಮಾತ್ನ ನಾನು ಒಪ್ಪೊದೇ ಇಲ್ಲ. ಹ್ಯಾಗೆ ಮಾಡುತ್ತೆ ಅದು ದೀಪ ಹೋಗಿ ಕತ್ತಲನ್ನ ಮಾಡುತ್ತೆಯೇ ?

ವಿ. ಸಿ. : ಅಂತ ಜನ ಸಾಹಿತ್ಯ .... ಒಳ್ಳೇ ಸಾಹಿತ್ಯ ನಿರ್ಮಾಣ ಮಾಡೋದೇ ಇಲ್ಲಿ ಅಂತೀರ ?

ಮಾಸ್ತಿ : ಈ ಒಳಗಿನ ಕಣ್ಣಿನ ಪ್ರೇರಣೆಗೆ ತೋರಿಸಿದ್ದನ್ನ ಬರೀತೀನಿ ಅಂತ ಹೇಳಿದೋನಿಗೆ ಈ ಕೆಡಕು ಅಂತನ್ನೋದು ಸಾಧ್ಯವಿಲ್ಲ ಸಾಹಿತ್ಯ ಒಳ್ಳೇದಾಗುತ್ತೊ ಬಿಡುತ್ತೊ ಅದು ಆಮೇಲಿನ ಮಾತು. ಏಕೆಂದರೆ ಅವನು ಹೇಳೋ ಶಕ್ತಿಯ ಮೇಲೆ ಹೋಗ್ತದೆ ಅದು ಅವನಿಗೆ ಭಾಷೆ ಇಲ್ದೆ ಇರಬಹುದು, ಅವನಿಗೆ ಹೇಳೊದಕ್ಕೆ ನಾಲಗೆ ಇಲ್ದೆ ಇರಬಹುದು. ಅಥವಾ ಅವನು ಕಂಡದ್ದು ಸ್ಪಷ್ಟವಾಗಿಲ್ದೆ ಇರಬಹುದು. ಯಾವುದೋ ಕಾರಣದಿಂದ ಬರವಣಿಗೆ ಯೋಗ್ಯತೆ ಸಾಲ್ದೆ, ಒಣ ವಸ್ತುವಾಗಿ ಕಡಿಮೆ

ಯೋಗ್ಯತೇದು ಆಗಬಹುದು ಬರವಣಿಗೆ ಅಂತನ್ನೋದು ಆದರೆ ಕೆಟ್ಟ ದಿಕ್ಕು ಹೇಳುತ್ತೆ ಅಂತ ನಾನು....

ವಿ. ಸಿ. : ಈ ಕೊಲೆ, ಸೋಲು ಇಂಥದ್ದನ್ನೆ ಹೆಚ್ಚು ಮಾಡಿಕೊಂಡು ಬರೀತಾ ತಾರಲ್ಲಾ ಆ ವಿಚಾರದಲ್ಲಿ ನಿಮ್ಮ ಯೋಜನೆ ಏನು ?

ಮಾಸ್ತಿ : ಬೇಕು, ಅದನ್ನ ಹೇಳಬೇಕು. ಈಗ.... ಈ.... ಶೇಕ್ಸ್‌ಪಿಯರ್ ಟ್ರಾಜಿಡಿ ಬರೀ ಎಲ್ಲ ಕೊಲೆ, ಸೋಲನ್ನೇ ಹೇಳ್ತಾ ಇದೆ....

ವಿ. ಸಿ. : ಅದು ನಾಟಕ

ಮಾಸ್ತಿ : ನಾಟಕ ಆಗಲಿ, ಕವಿತೆ ಆಗಲಿ ಎಲ್ಲ ಒಂದೆ ಈ ಕೆಲಸಕ್ಕೆ. ಇದು ಅದರ ರೂಪದ ಮೇಲೆ ಹೋಗೋದಿಲ್ವಲ್ಲ... ಅದರ ಉದ್ದೇಶವೇನು. ಮ್ಯಾಕ್ಬೆತ್ ಕೆಟ್ಟ, ಅ ಕೊರಿಯಲಿನಸ್....ಕೆಟ್ಟ, ಹ್ಯಾಮ್ಲೆಟ್ ಪಾಪ ಕೆಟ್ಟ. ಯಾಕೆ ಹೇಳ್ತದೆ ಅದು ನೀವು ಕತೆ ಬರೆದ್ರೂ ಅದೇ ಹೇಳ್ತಿರಿ, ಪದ್ಯ ಬರೆದರೂ ಅದೇ ಹೇಳ್ತೀರಿ.

ವಿ. ಸಿ. : ಆದರೆ ಎಂಟ್ಹತ್ತು ಜನ ಇರ್‍ತಾರೆ, ಎಂಟ್ಹತ್ತು ನಿಲವುಗಳಿರ್‍ತವೆ. ಸಂಬಂಧ ಗಳಿರ್‍ತವೆ ಅವರವರನ್ನ ತೋರಿಸೋದಕ್ಕೋಸ್ಕರ ಅಲ್ಲಿ ಬರೀಬಹುದು.

ಮಾಸ್ತಿ : ಹೂ.... ತೋರಿಸೋದರಲ್ಲೂನು ಕವಿಯಾದವನು ತನ್ನ.... ತಾನು ಏನು ಕಂಡ ಅಂತನ್ನೊದನ್ನ ಹೇಳ್ತಾನ್ನೋಡಿ ದರ್ಶನ ಬರ್‍ತದೆ. ಅದರಲ್ಲಿ ಒಂದೊಂದು ಒಳ್ಳೇ ಬರಹ ಅಂತನ್ನೋದರಲ್ಲೆಲ್ಲ ಮೂಲ ದಲ್ಲಿ ಒಂದು ದರ್ಶನ ಇರುತ್ತೆ ; ದರ್ಶನ ಇಲ್ದೆ ಬರವಣಿಗೆ ಇಲ್ಲ, ದರ್ಶನ ಇಲ್ಸೆ ಒಳ್ಳೇ ಬರವಣಿಗೆ ಬರೋದಿಲ್ಲ. ಏನನ್ನ ಕಾಣ್ತದೋ ಅದನ್ನ....ಚಿತ್ರಿಸಬೇಕು ಅದನ್ನ ಹೇಳಬೇಕ ಈ ಒಳಗಿನ ಕಣ್ಣು ಒಂದು ದೇಶದ ಸ್ವಾತಂತ್ರ್ಯವನ್ನು ಮಾರೋದಕ್ಕೆ ಇವನನ್ನು ಪ್ರೇರೇಪಿಸಿತು ಅನ್ನೋ ಮಾತ್ನ ನಾನು ಒಪ್ಪೋದೇ ಇಲ್ಲ. ಹ್ಯಾಗೆ ಮಾಡತ್ತೇ ಅದು, ದೀಪ ಹೋಗಿ ಕತ್ತಲನ್ನ ಮಾಡುತ್ತೆಯೇ ?

ವಿ. ಸೀ : ಮೊದಲಲ್ಲಿ ತುಂಬಾ ಉತ್ತಮ ಸಾಹಿತ್ಯ ಅಂತನ್ನೋದಲ್ಲಿ ಇದು ಇರ್‍ತದೆ ತಾವು ಹೇಳಿದ ಹಾಗೆ.

ಮಾಸ್ತಿ : ಎಂತಹ ಹತ್ತನೆಯ ಸಾಹಿತ್ಯದಲ್ಲಿ ಕೂಡ ಕಡಿಮೆಯಾದರೂ ಬರ್‍ತದೆ ಅದು ಒಂದಿಷ್ಟಿರ್‍ತದೆ ಅದು ತುಂಬೆ ಹೂವಿನಲ್ಲಿ ರಸ ಇದ್ದ ಹಾಗೆ.... ಹ....ಹ....ಹ....ಹ.

ವಿ. ಸೀ : ಇವನಿಗೆ ಒಂದು ದೇಶದ ಒಬ್ಬ ಪ್ರಜೆಯ ಹಾಗೆ ಯಾವುದಾದರೂ ಜವಾಬ್ದಾರಿ ಉಂಟೇ ?

ಮಾಸ್ತಿ : ಓ ಉಂಟು, ವ್ಯಕ್ತಿಯಾಗಿ ಉಂಟು. ಮತ್ತದೇ ಮಾತೇನೆ. ಸಾಹಿತಿಯಾಗಿ

ನಾನು ಭರತ ವರ್ಷಕ್ಕೆ ಅಂತ ಮಾಡಬೇಕಾದ್ದೇನೂ ಇಲ್ಲ. ನಾನು ವ್ಯಕ್ತಿಯಾಗಿ ಭರತ ವರ್ಷಕ್ಕೆ ಮಾಡಪೇಕಾದ್ದುಂಟು. ನಾನು ಏನು ಹೇಳ್ಬೇಕು, ಭರತವರ್ಷದ ಸಂಪ್ರದಾಯ, ಅದು ಹಿಂದಿನಿಂದ ನಂಬಿಕೊಂಡು ಬಂದಿರುವ ಸಂಗತಿ ಎಷ್ಟು ನಿಜವೋ ಅಷ್ಟೆ ನಿಜವಾಗಿ ಈ ಹೊಸ ಕಾಲದಲ್ಲಿ ನಮ್ಮಲ್ಲಿ ಬಂದಿರತಕ್ಕಂತ ತಿಳುವಳಿಕೆ ಅಂತನ್ನೋದೂನೂ ನನ್ನ ಮನಸ್ಸನ್ನು ರೂಪಿಸಿದೆ. ಒಟ್ಟು ನನ್ನ ಮನಸ್ಸು ಈ ಅದರಿಂದ, ಇದರಿಂದ.... ಎರಡು ಪ್ರಭಾವದಿಂದಲೂ ಸೇರಿ ಒಂದು ಆಕಾರಕ್ಕೆ ಬಂದಿದೆ. ಅದು ಯಾವುದೋ ಒಂದನ್ನ ಕಾಣಿಸುತ್ತೆ, ನಾನು ಅದನ್ನ ಚಿತ್ರಿಸ್ತೇನೆ, ಅದಕ್ಕೊಂದು ಆಕಾರ ಬರುತ್ತೆ. ಆಗ ಈ ನಾನು ಚಿತ್ರಿಸೋದು ಬರೀ ಹಿಂದಿನ ಸಂಪ್ರದಾಯದ ಪ್ರಕಾರ ಆಗೋದಿಲ್ವಲ್ಲ. ಹೊಸದು ಅದರಲ್ಲಿ ಬೆರೆತಿರ್‍ತದೆ. ಎರಡು ಬೆರೆಯೊದೆಂತಾದ್ದು ಒಂದೇ ಆಗಿರುತ್ತದೆ. (ನಗು) ಎರಡೂ ಸೇರಿ ಒಂದೇ ಒಂದು.... ಒಂದು ಪಾನಕ ಆಗಿರ್‍ತದೆ ಅದು.

ವಿ. ಸಿ. : ಈ ಭಾರತೀಯತೆ ಅಂತಂತನ್ನೋ ಗುಣ ಯಾವುದು ಒಂದು ಸಾಹಿತ್ಯದಲ್ಲಿ ನಾವು ಇವತ್ತು ಹೇಳಬೇಕಾದರೆ ?

ಮಾಸ್ತಿ : ಭಾರತೀಯತೆ ಅಂತನ್ನೋದರ ಅರ್ಥ.... ಈಗ.... ನಮ್ಮ ದೇಶ ಈಗ ಎಷ್ಟೋ ಮಾರ್ಪಟ್ಟಿದ್ದರೂ ಇವತ್ತಿನ ದಿವಸ ಈ ಹೊಸ....ಹೊಸ ನಾಗರೀಕತೆಯ ಸಂಪರ್ಕದಿಂದ ಎಷ್ಟೇ ಬೇರೆಯಾಗಿದ್ದರೂನೂ, ಕೆಲವು ಮೂಲ ಭಾವಗಳು ಒಂದೇ ಆಗಿ ನಿಂತು ಬಿಟ್ಟಿರ್‍ತವೆ. ಈಗ ನಮ್ಮಲ್ಲಿ ಹಿಂದಿನಿಂದ ಹೇಳ್ಕೊಂಡು ಬಂದಿದ್ದಾರೆ ವಸುಧೈವ ಕುಟುಂಬಕಂ, ಅಂತ.ನಮ್ಮ ಜನ ಎಲ್ಲಾರೂ ಎಲ್ಲಾ ಹೊತ್ತಿನಲ್ಲೂ ಅದನ್ನ ನಡೆಸಿದರು ಅಂತಲ್ಲ. ಆದರೆ ಕಂಡರು ಅದನ್ನ, ಉದಾರಚರಿತಾನಾಂ ತು ವಸುಧೈವ ಕುಟುಂಬಕಂ" ಅಂದ ಯಾವುದೋ ಒಬ್ಬ ದೊಡ್ಡ ಮನುಷ್ಯ. ಎಂದು ಹೇಳಿದನೋ ಯಾಕೆ ಹೇಳಿದನೋ ಗೊತ್ತಿಲ್ಲ ನನಗೆ, ಆದರೆ ಮಾತು ದೊಡ್ಡ ಮಾತಾಗಿಬಿಡ್ತು ಎಲ್ಲರೂ ಒಪ್ಪಿಕೊಂಡುಬಿಟ್ಟರು ಅದನ್ನ

ಓಂ ತತ್‌ಸವಿತುರ್ವರೇಣ್ಯ ಭರ್ಗೋದೇವಸ್ಯ
ಧೀಮಹಿ ಧಿಯೋಯೋನಃ ಪ್ರಚೋದಯಾತ್

ಅಂತಂದು ಬಿಟ್ರು. ಎಂತಾ ದೊಡ್ಡ ಮಾತಾಗಿ ಬಿಡ್ತು ಅದು ಒಂದೊಂದು ವ್ಯಕ್ತಿ ಈ ಮಾತನ್ನು ಹಿಡಕೊಂಡು "ಅಯ್ಯ ನನಗೆ ಒಳ್ಳೆ ಪ್ರೇರಣೆಯನ್ನು ಕೊಡು ನನ್ನ ಕಾಪಾಡು" ಅಂತ ಬೇಡ್ತಾ ಇದ್ದುಬಿಟ್ಟು ಆ ಪ್ರೇರಣೆ ಪ್ರಕಾರ ನಡೆದುಬಿಟ್ರೆ. ಇನ್ನು ಜೀವನದಲ್ಲಿ.... ಇನ್ನು ಬಂಗಾರ ಯಾಕೆ ಇನ್ನು ಬೇರೆ ಯಾಕೆ ಬೇಕು....

ವಿ. ಸಿ. : "ಮಾನವಕುಲಮೊಂದೆವಲಂ" ಅಂದ ಪಂಪ

ಮಾಸ್ತಿ : ಅಲ್ಲವೇ ಸ್ವಾಮಿ, ಅದರಿಂದ ಈ ಒಳ್ಳೇ ಎತ್ತರದ ಮಾತೇನೋ ಹುಟ್ಟಿ ಬಿಡ್ತು ಹಿಂದೆ ಯಾವುದೋ ಒಂದು ಕಾಲದಲ್ಲೀ ಸರ್ವಭೂತಹಿತೇ ರತಃ ಅಂತಂದರು. ರಾಮಚಂದ್ರನನ್ನ ವರ್ಣಿಸಬೇಕಾದರೆ, ಸರ್ವ ಭೂತ ಹಿತೇ ರತಃ ಅಂತಂದರು. ಧರ್ಮರಾಯನನ್ನು ವರ್ಣಿಸಬೇಕಾ ದರೆ ಸರ್ವಭೂತೇ ಹಿತೇ ರತಃ ಅಂತಂದರು. ಇವೆಲ್ಲ ಇವು ನಮ್ಮ ಎತ್ತರಗಳು. ಆ ಎತ್ತರಕ್ಕಿಂತ ಇನ್ನು ಎತ್ತರ ಲೋಕದಲ್ಲಿ ಯಾರೂ ಎಂದೂ ಹೇಳಲಾರರು, ಇನ್ನು ಸಾಧ್ಯವಿಲ್ಲ. ಅಂಥಾ ಎತ್ತರದಲ್ಲಿ ಹುಟ್ಟಿ ದರು ನಮ್ಮ ಹಿರಿಯರು. ಹೊಸ ಕಾಲದ ಎಷ್ಟೇ ತತ್ವ ತಿಳುವಳಿಕೆ ನಮಗೆ ಬಂದರೂನೂ ಅದನ್ನ ಬಿಡಬೇಕಾಗಿಲ್ಲ ಬಿಡತಕ್ಕದ್ದೂ ಅಲ್ಲ ನಾವು. ಆದರಿಂದ ಭಾರತೀಯ ಅಂತ ನಾನು ಹೇಳೋದು.

ವಿ. ಸೀ : ಯಾವುದೋ ಒಂದು ಕಾಲದಲ್ಲಿ ತಾವು ಸಾನೆಟ್ಟುಗಳು ಬರೆದು ನಿಲ್ಲಿಸಿ ಬಿಟ್ಟ ಹಾಗೆ ಕಾಣುತ್ತೆ. ಇದಕ್ಕೇನಾದರೂ ಕಾರಣ ಉಂಟೇ ?

ಮಾಸ್ತಿ : ಏನಿಲ್ಲ. ಏನಂದರೆ, ನನಗೇನನ್ಸುತ್ತೆ ಅಂದರೆ ತಾವು ನನ್ನ ಬರವಣಿಗೆ ನೋಡಿದರೆ ಗೊತ್ತಾಗುತ್ತೆ ಒಂದು ಕಾಲದಲ್ಲಿ ಬರೀ ಗೀತೆಗಳನ್ನ ಬರೆದೆ ಬರೀತಾ ಹೋದೆ. ಗೀತೆಗಳನ್ನ ಬರೀತಾ ಹೋದೆ. ಅದು ಒಂದು ಕಡೆ ನಿಂತಿತು. ಆಮೇಲೆ ಈ ಸಾನೆಟ್ಟುಗಳನ್ನ ಬರೆದೆ ಬಂತು. ಆಮೇಲೆ ಈ ಕಥನಕವನಗಳನ್ನ ಬರೀತೇನೆ ಅಂದೆ ಒಂದಷ್ಟು; ನಿಂತಿತು. ಆಮೇಲೆ ಈ ಪದ್ಯಗಳು ಇದು ರಾಮನವಮಿ, ಮೂಕನ ಮಕ್ಕಳು.

ವಿ. ಸೀ : ಆ ಮಿತಿಗೆ ನಿಲ್ಲತಕ್ಕದ್ದು ಯಾವುದಾದರೂ ಒಂದು ಗುಣ ತಮಗೆ ವಿಶೇಷವಾಗಿ ಕಂಡಿದೆಯಾ ? 14 ಸಾಲುಗಳಲ್ಲಿ....

ಮಾಸ್ತಿ : ಯಾವುದು ಹೇಳಿ ?

ವಿ. ಸೀ : 14 ಸಾಲುಗಳಲ್ಲಿ ಸಾನೆಟ್ ಬರೀ ಬೇಕಲ್ಲಾ ಅದಕ್ಕೆ ಸಂಬಂಧಪಟ್ಟು ಒಂದು ಭಾವಹಾಗಲೀ ಒಂದು Rythm....

ಮಾಸ್ತಿ : ಹೌದು .... ಹೌದು .... ಅದು .... ಸಾನೆಟ್ಟಿನ ಲಕ್ಷಣವೇ. ಅದು ನಮಗೆ ಇಂಗ್ಲಿಷ್ ಸಾನೆಟ್ಟಿನಲ್ಲಿ ಬಹಳ ಚೆನ್ನಾಗಿ ಸಿಗುತ್ತೆ ಅದು ಶೇಕ್ಸ್‌ಪಿಯರ್‌ನಲ್ಲಿ ಸಿಕ್ಕುತ್ತೆ ಶೇಕ್ಸ್‌ಪಿಯರ್‌ಗಿಂತ ಚೆನ್ನಾಗಿ ಸಿಗೋದು ನಮಗೆ ಮಿಲ್ಟನ್‌ನಲ್ಲಿ, ವರ್ಡ್ಸ್ ವರ್ತ್‌ನಲ್ಲಿ. ಮಿಲ್ಟನ್, ವರ್ಡ್ಸ್‌ವರ್ತ್ ಬಹಳ ಚೆನ್ನಾಗಿ ಸಾನೆಟ್ಟು ಬರೆದಿದ್ದಾರೆ, ನನಗೆ ಗುರುಗಳಾದವರು ಈ ಸಾನೆಟ್ಟಿಗೆ ಗುರುಗಳಾ ದವರು ಮಿಲ್ಟನ್, ವರ್ಡ್ಸ್‌ವರ್ತ್. ಅದನ್ನು ಓದಿಕೊಂಡು ಅವರು ಏನು ಯಾವ ಕ್ರಮವನ್ನು ಅನುಸರಿಸಿದ್ದಾರೆ ಹ್ಯಾಗೆ ಒಂದು ಸಂಗತಿ

ಯನ್ನು ಹಿಡಿದು, ಅದನ್ನ ಒಂದು ವಿಸ್ತಾರಮಾಡಿ, ಒಂದು ವಿವರಣೆ ಕೊಟ್ಟು ಒಂದು....ಒಂದು ಸೂತ್ರಕ್ಕೆ ತಂದು ಮುಗಿಸ್ತಾರೆ ಅದನ್ನ ಅಂತ, ಅದನ್ನೋಡಿಕೊಂಡು ಅದರಂತೆ ಕನ್ನಡದಲ್ಲಿ ನಮ್ಮ ಜನಕ್ಕಿರಲಿ ಅಂತ ನನ್ನ ಭಾವನೆ. ಅನೇಕವನ್ನ ಹಾಗೆ ಬರೆದಿಟ್ಟೆ, ಒಂದು ಕಾಲದಲ್ಲಿ. ಆಮೇಲೂ ಬರೆದಿದ್ದೇನೆ, ಅಷ್ಟು ಹೆಚ್ಚಾಗಿ ಬರೆದಿಲ್ಲ.

ವಿ. ಸೀ : ಈಗ ಸಾಹಿತ್ಯ ವಿಮರ್ಶೆ ಹೇಗೆ ನಡೀತಾ ಇದೆ, ಅದರಲ್ಲಿ ಉತ್ತಮ ಮಾರ್ಗ ಯಾವುದು ಅಂತ ತಮಗನಿಸುತ್ತೆ ?

ಮಾಸ್ತಿ : ನಮ್ಮಲ್ಲಿ ಸದ್ಯದಲ್ಲಿ ವಿಮರ್ಶೆ ಆಗ್ತಾ ಇರೋದು ಬಹಳ ಕಡಿಮೆ. ನಾನಂತೂ ಆರಂಭದಲ್ಲಿ ಯಾವಾಗಲೂ ಸ್ವಲ್ಪ ಕೊಡೋದು ಎದುರು ಗೆದುರಿಗೆ ಕೊಟ್ಟಿದ್ದೇನೆ ಹೊರತಾಗಿ ಬರವಣಿಗೆ ಅಂತ ಹೋಗಲಿಲ್ಲ ಹೊಸಕಾಲದ ಬರವಣಿಗೆ ವಿಷಯ ನಾನೇನು ಹೇಳ್ಲಿಕ್ಕೆ ಹೋಗಲಿಲ್ಲ ಇದಕ್ಕೆ ಕಾರಣ ಇಷ್ಟು ಬರವಣಿಗೆ ಸಾಗಿದಷ್ಟು ಬರಬೇಕು. ಬರಿಯೋ ಹುಡುಗನ್ನ ಮೊದಲೇ ಬರಿಯೋವಾಗೇನೇ ಚೆನ್ನು ಹುರಿಯಾಗದ ಹಾಗೆ ಕೆಟ್ಟ ಮಾತಾಡಿಬಿಟ್ರೆ ಅವನು ಬರೆಯೋದೇ ಇಲ್ಲ, ಪಾಪ ಹೆದರಿ ಬಿಡ್ತಾನೆ.

ವಿ. ಸೀ : 'ಸಾಹಿತ್ಯ ವಿಮರ್ಶಕನಿಗೆ' ಅಂತನ್ನೋ ಸಾನೆಟ್ಟಿನಲ್ಲಿ ಕೂಡ ಆ ಮಾತನ್ನೇ ಹೇಳಿದ್ದೀರಿ ?

ಮಾಸ್ತಿ : ಹೌದು....ಹೌದು ಬರೆಯೋರನ್ನ ನಾವು ಅವರ ಉತ್ಸಾಹ ಕೆಡೋ ಹಾಗೆ ಮಾತುಗಳನ್ನ ಆಡಬಾರದು ಅಂತ ಬಾಯಿ ಮುಚ್ಚಿಕೊಂಡು ಇದ್ಬಿಟ್ರೆ, ನಾನು ಯಾರೋ ಚೆನ್ನಾಗಿಲ್ಲ ಅಂತಂದಾಗಲೂ ಬಾಯಿ ಮುಚ್ಚಿಕೊಂಡು ಇರೋದು ಕಂಡಾಗ ಏನಾದರೂ ಹೇಳೊದು ಸರಿ ಚೆನ್ನಾಗಿದಾಗ ಚೆನ್ನಾಗಿದೆ ಅಂತ್ಹೇಳೋದು.

ವಿ. ಸೀ : ಈಗ ಇನ್ನೊಂದು ಪ್ರಶ್ನೆ ಇಂಗ್ಲಿಷಿನಿಂದ, ತಮಿಳಿಂದ, ಬೇರೆ ಭಾಷೆಗಳಿಂದ ತಾವು ಭಾಷಾಂತರ ಮಾಡಿದ್ದೀರಿ. ಬೇರೆಯವರನ್ನ ಭಾಷಾಂತರ ಮಾಡು ವಾಗ ಅವರ ಧ್ವನಿ, ವಾಣಿ, ಅವರ ರಚನೆ ಅವುಗಳಿಗೆ ಹತ್ತಿರ ಇರೋದು ಮೇಲೋ ಅಥವಾ ಪೂರ್ತಿ ಕನ್ನಡ ಆಗಬೇಕು ಅಂತ ........

ಮಾಸ್ತಿ : ಕನ್ನಡ ಆಗಬೇಕೂಂತ ಅಲ್ಲಿರೋದನ್ನ ತಪ್ಪಿಸೋದು ಸರಿಯಾಗೋದಿ ಲ್ವಲ್ಲ ವ್ಯಕ್ತಿತ್ವಾನ ಕೊಡಬೇಕಲ್ಲ. ಫೊಟೋನ ಟಚ್ ಅಪ್ ಮಾ ಡೋನು ಚಿತ್ರಾನ ಬೇರೆ ಮನುಷ್ಯನ ಚಿತ್ರ ಮಾಡಬಾರ್ದು (ನಗು)

ವಿ. ಸೀ : ಈ ಪಾಶ್ಚಿಮಾತ್ಯ ಪ್ರಭಾವ ನಮ್ಮ ನಾಡಿನ ಜೀವನದ ಮೇಲೆ ಬಿದ್ದಿದೆ, ವಿಜ್ಞಾನ ತಂತ್ರ ಬಿದ್ದಿದೆ, ಯಂತ್ರ ಶಿಲ್ಪ ಬಿದ್ದಿದೆ, ಇವುಗಳಿಂದ ನಮ್ಮ

ದೇಶದ ಮೇಲೆ ಅನೇಕ ಪರಿಣಾಮಗಳು ಉಂಟಾಗಿವೆ, ಸಾಹಿತ್ಯದ ಮೇಲೆ ಇದರ ಪ್ರಭಾವ ಒಳ್ಳೇದಾಗಿದೆಯೇ, ಕೆಟ್ಟದ್ದಾಗಿದೆಯೇ ?

ಮಾಸ್ತಿ : ಬಹಳ ಪರಿಣಾಮ ಆಗಿದೆ, ಒಟ್ಟಿನಲ್ಲಿ ಒಳ್ಳೇದೆ ಆಗಿದೆ, ಒಟ್ಟಿನಲ್ಲಿ ಬಹಳ ಒಳ್ಳೇದಾಗಿದೆ. ಅದು ಒಳ್ಳೇದು ನಮಗೆ. ಇಂಗ್ಲಿಷಿನ ಸಂಪರ್ಕ ಇಲ್ಲದಿದ್ದರೆ, ನಾವು ಈ ಹೊಸ ಕಾಲದ ಗೀತಾನ್ನ ಬರೀತಾ ಇದ್ವೇ, ಈ ಹೊಸ ಕಾಲದ ಕಥೆಗಳನ್ನ ಬರೀತಾ ಇದ್ವೇ, ಈ ಹೊಸ ಕಾದಂಬರಿಗಳನ್ನ ಬರೀತಾ ಇದ್ವೇ ಇದಕ್ಕೆಲ್ಲಾನೂ ಯಾರು ಮೇಲ್ಪಂಕ್ತಿ? ಆಂಗ್ಲ ಲೇಖಕರಲ್ಲವೇ? ಬಹಳ ಒಳ್ಳೇದಾಯ್ತುಲ್ಲ. ಅವರ ವಿಷಯದಲ್ಲಿ ಸಂದೇಹವೇನಿದೆ ನಮಗೆ? ನಮ್ಮ ಭಾಗ್ಯ. ನಮಗೆ ಹೊಸ ಈ ಹೊಸಕಾಲದ ಸಾಹಿತ್ಯ ಅಂತನ್ನೋದು ಹೊರಗಿಂದ ನಮಗೆ ದೊರಕಿದ್ದು ಅಂತನ್ನೋದು. ನಮಗೆ ಚಿನ್ನದ ಗಣಿಗಳು ಸಿಕ್ಕಿದ್ಹಂಗಾಯ್ತು.

ಎ. ಸೀ : ಹೌದು. ಬೇರೆ ಬೇರೆ ಗ್ರಂಥಗಳೂ, ಪ್ರಕಾರಗಳೂ, ಪ್ರಮಾಣಗಳೂ ಎಲ್ಲಾ ಸಿಕ್ಕೋಹಾಗಾಗಿದೆ.

ಮಾಸ್ತಿ : ಬೇಕಾದಷ್ಟು ಸಿಕ್ಕತಲ್ಲ, ಇವತ್ತಿನ ದಿವಸ ನಾವೂ ವಸುಧೈವ ಕುಟುಂಬಕಂ ಅಂತನ್ನೋದು ಬರೇ ಮಾತಾಗಿರಬಾರದಲ್ಲ, ವಸುಧೈವ ಕುಟುಂಬಕಂ ಬೇಕಾದರೆ....ಹೊರಗಿನ ಸಂಪರ್ಕ ಬೇಕಲ್ಲ ನಮಗೆ ಅದು ದೊರಕಿದೆ ನಮಗೆ ಇವತ್ತಿನ ದಿವಸ.

ಎ. ಸೀ : ಆ ಭಾಷೆಯ ವಿದ್ಯಾಭ್ಯಾಸ ವ್ಯಾಸಂಗ ಎಲ್ಲಾ ನಿಂತ್ಹೋಗ್ಬಿಟ್ಟು ನಮ್ಮ ನಮ್ಮವರೇ ಬರೆಯೋದಕ್ಕೆ ಆರಂಭ ಮಾಡಿತೆಂದರೆ ಆಗ ಅವೆಲ್ಲಾ ತಪ್ಹೋಗೋದಿಲ್ವೇ

ಮಾಸ್ತಿ : ಆ....ಈಗ ಇಂಗ್ಲಿಷಿನವರಿಗೆ ಇಂಗ್ಲಿಷಿನಲ್ಲೇ ವಿದ್ಯಾಭ್ಯಾಸ ನಡೆಯೋದರಿಂದ ಏನೇನು ಕೆಡಕಾಗಿದೆಯೋ ಅದು ನಮಗೂ ಆಗುತ್ತೆ. ಆದರೆ ಇಂಗ್ಲಿಷಿನೋನು ಕೆಟ್ಟಿಲ್ಲ ಯಾಕೆ ಅಂತೀರೋ ಅವನು ಸಂಪರ್ಕ ಉಳಿಸಿಕೊಂಡಿದ್ದಾನೆ. ನಾವು ಜಾಣರಾದರೆ ಬರೀ ಇಂಗ್ಲಿಷಲ್ಲ ಲೋಕದ ಇತರ ಭಾಷೆಗಳ ಸಂಪರ್ಕವನ್ನೂ ಇಟ್ಕೋಬೇಕು. ರಷ್ಯನ್ ತಿಳೀಬೇಕು ಜಪಾನೀಸ್ ತಿಳೀಬೇಕು, ಚೈನೀಸ್ ತಿಳೀಬೇಕು, ಸ್ಪ್ಯಾನಿಷ್ ತಿಳೀಬೇಕು. ನಮ್ಮ ಕಾವ್ಯ ನಮ್ಮ ಸಾಹಿತ್ಯ ಉತ್ತಮ ಮಟ್ಟದಲ್ಲಿ ಬರಬೇಕು ಅಂತಂದರೆ ಆ ಮಟ್ಟ ಅಂತನ್ನೋದು ಬೇರೆ ದೇಶದ ಬೇರೆ ಭಾಷೆಗಳ ಸಾಹಿತ್ಯ ಮಟ್ಟಕ್ಕಿಂತ ಕಡಿಮೆಯಾಗ ಬಾರದಲ್ಲ. ಆ ಮಟ್ಟ ಮುಟ್ಟಬೇಕೆಂದರೆ ಆ ಮಟ್ಟ ಮೊದಲು ಯಾವುದು ಅಂತ ಗೊತ್ತಿರಬೇಕೂಂತಂದರೆ, ತಿಳೀಬೇಕಲ್ಲಾ ಅದನ್ನ.

ಎ. ಸೀ : ತಾರತಮ್ಯಗಳು ತಿಳೀದೇ ಹೋದರೆ ಏನೂ ಬೆಲೆ ಉಳಿಯೋ ಹಾಗೇ ಇಲ್ಲ.

ಮಾಸ್ತಿ : ಏನೂ ಉಳಿಯೋ ಹಾಗಿಲ್ಲ. ಆದ್ದರಿಂದ ನಾವೂ ಹೊರಗಿನ ಸಾಹಿತ್ಯದ ಸಂಪರ್ಕ ಇಟ್ಟುಕೊಳ್ಳಲೇ ಬೇಕು. ಬರೀ ಸಂಪರ್ಕ ಅಂತಲ್ಲ ಒಳ್ಳೇ ತಿಳುವಳಿಕೆ ಇಟ್ಕೋಬೇಕು. ಅಭ್ಯಾಸ ಮಾಡಬೇಕು, ಪಂಡಿತರಾಗಬೇಕು ಇಂಗ್ಲಿಷ್ ಸಾಹಿತ್ಯದಲ್ಲಿ. ಎಂದೋ ಒಂದು ಕಾಲದಲ್ಲಿ ಇಂಗ್ಲಿಷ್ ಸರ್ಕಾರದಲ್ಲಿ ಕೆಲಸ ಸಿಗುತ್ತೆ ಅನ್ನೋ ಕಾರಣಕ್ಕೆ ಇಂಗ್ಲಿಷ್ ಕಲಿತೆ ವೇನೋ. ನಾಳೆ ದಿವಸ ಅದಕ್ಕೋಸ್ಕರ ಅಲ್ಲ ಬೇರೆ ಒಂದು ಕಾರಣಕ್ಕೆ ಇಂಗ್ಲಿಷ್ ಕಲೀಬೇಕು. ಶೇಕ್ಸ್‌ಪಿಯರ್ ಲೋಕದ ಸಾಹಿತ್ಯದ ಬಹು ಶ್ರೇಷ್ಠ ಕವಿಗಳಲ್ಲಿ ಒಬ್ಬ. ಅವನ ಕೆಲಸ ನಮಗೆ ಚೆನ್ನಾಗಿ ಗೊತ್ತಾಗ ಬೇಕು, ಚೆನ್ನಾಗಿ ಪಾಠ ಆಗಬೇಕು.

ಎ. ಸೀ : ಈಗ ಸರ್ಕಾರಗಳೂ, ಸಾಹಿತ್ಯ ಸಂಸ್ಥೆಗಳೂ ಸಾಹಿತ್ಯಕ್ಕೆ ಹೇಗೆ ಉತ್ತೇಜನ ಕೊಡ ಬಹುದು, ಪ್ರೋತ್ಸಾಹ ಕೊಡಬಹುದು....

ಮಾಸ್ತಿ : ತುಂಬಾ ಪ್ರೋತ್ಸಾಹ ಕೊಡಬೇಕು. ನಮ್ಮ ಲೇಖಕರು ಜೀವಿಸೋದಕ್ಕೆ ಅನುಕೂಲ. ಆಗಬೇಕು ಬರೆದವರಿಗೆಲ್ಲಾ ಹಣಕೊಡಿ, ಆಸ್ತಿ ಮಾಡಿ ಕೊಡಿ ಅಂತಾ ನಾನು ಹೇಳೋದಿಲ್ಲ. ಆದರೆ ಬರೆದ ಮನುಷ್ಯನಿಗೆ ಅನ್ನ ದೊರೆಯೋ ಅಷ್ಟರ ಮಟ್ಟಿಗೆ ಇರಬೇಕು. ಅವನು ಸಾಮಾನ್ಯವಾಗಿ ಒಂದು, ಸಾಮಾನ್ಯ ನಾಗರೀಕನ ಜೀವನ ನಡೆಸೋ ಹಾಗಿರಬೇಕು. ಅಂದರೆ, ವಯಸ್ಸಾಗೋ ದಿವಸಕ್ಕೆ ಒಂದು ಮದುವೆಯಾಗಬೇಕು. ಅವನಿಗೆ, ಎರಡು ಮಕ್ಕಳಾಗಬೇಕು ಅವನಿಗೆ, ಹೆಂಡತಿಗೆ ಅನ್ನ ಬಟ್ಟೆ ಮಕ್ಕಳಿಗೆ ಶಾಲೆಗೆ ಹೋಗೋದಕ್ಕೆ ಶಾಲೆ ಖರ್ಚು ಇಷ್ಟಕ್ಕಾಗೋ ಹಾಗೆ ಬರೆಯೋ ಮನುಷ್ಯನಿಗೆ ಜೀವನ ನಡೆಸುವಷ್ಟು ಏರ್ಪಾಡನ್ನು ಸರ್ಕಾರಗಳು ಮಾಡಿಕೊಡಬೇಕು. ಸರ್ಕಾರ ಅಂದರೆ ಯಾರೋ ಜನ ಅದರಲ್ಲಿ ರೂಪಾಯಿ ತಂದು ಎಲ್ಲೂ ಇರೋದಿಲ್ವಲ್ಲ. ನಮ್ಮ ಜನ ಸೇವಕರನ್ನೇ ಸರ್ಕಾರ ಅಂತನ್ನೋದು. ಜನತೆ ನೋಡಿಕೋಬೇಕು ತಾನೆ ಲೇಖಕನನ್ನು? ಲೇಖಕ ಜನದ ಒಂದು ಕೆಲಸ ಮಾಡತಕ್ಕಂಥ ಒಂದು ಸೇವಕ ಅವನು. ಕಸಗುಡಿಸೋನಿಗೆ ಸಂಬಳ ಕೊಟ್ಟು ಅನ್ನ ಹಾಕ್ತೀವಿ. ಕಥೆ ಬರೆಯೋನಿಗೆ ಕಾಸು ಕೊಟ್ಟು ಅನ್ನ ಹಾಕ್ಬೇಡವೇ ?

ಎ. ಸೀ : ಎಷ್ಟೊಂದು ನಮ್ಮ ಸಾಹಿತ್ಯ ಬೆಳೀಬಹುದಾಗಿತ್ತೋ ಅಷ್ಟರಮಟ್ಟಿಗೆ ಬೆಳೆದಿದೆ ಅಂತೀರ ?

ಮಾಸ್ತಿ : ಇಲ್ಲ,ಅಷ್ಟು ಬಗೆಯಲ್ಲೂ ಬೆಳೆದಿಲ್ಲ, ಅಷು ಎತ್ತರಕ್ಕೂ ಬೆಳೆದಿಲ್ಲ, ಅಷ್ಟು ಗಾತ್ರವೂ ಬೆಳೆದಿಲ್ಲ. ನಮ್ಮ ಹುಡುಗರು, ಇನ್ನೂ ಬರೆಯೋ ನಮ್ಮ ಹೆಣ್ಣುಮಕ್ಕಳು, ಗಂಡುಮಕ್ಕಳು ಬರೆಯೋದನ್ನೆ ಒಂದು ಕೆಲಸ ಅಂತ ಇಟ್ಟು ಕೊಂಡು ಬರೆಯೋದಕ್ಕೆ ಆರಂಭಿಸಿದರೆ,ಇನ್ನು 50 ವರ್ಷ ಕೆಲಸ ಮಾಡಿದರೆ ........

ವಿ. ಸಿ.: ಅದಕ್ಕೆ ತಕ್ಕಷ್ಟು ಅನುಭವ ಸಂಪತ್ತಿ ಕೂಡ ಪಡಕೋಬೇಡವೆ ?

ಮಾಸ್ತಿ : ಪಡಕೋಬೇಕು, ಪಡಕೋಬೇಕು. ಅಯ್ಯೋಸ್ವಾಮಿ ಭಾಷೆ ಕಲೀಬೇಕು, ಜೀವನ ನೋಡಬೇಕು, ಜೀವನದೊಳಗೆ ಬೆರೀಬೇಕು, ಜನದೊಂದಿಗೆ ಬೆರೀಬೇಕು ,ಓಡಾಡಿ ಬೆಂಗಳೂರಿನಲ್ಲಿ ಕುಳಿತುಬಿಟ್ಟು, ನನಗೆ ಯಾರೋ ಹೇಳಿದರು. ಇವರೇನು ಇದರಲ್ಲಿ ಗವೀಪುರದ ಎಕ್ಸ್‌ಟೆನ್ಷನ್ನಿನಲ್ಲಿ ಮಾಡಿ ಮೇಲೆ ಕುಳಿತುಬಿಟ್ಟು ಕತೆ ಬರೀತಾರೆ ಅಂತ. ನಾನು ಮಾಡೀ ಮೇಲೆ ಕೂತಿದ್ದೇನೆ ಒಂದು ಕೆಲವು ದಿವಸದಿಂದ, ಅದು ನಿಜ ಅದು. ಆದರೆ ಯಾವಾಗಲೂ ಮಾಡಿ ಮೇಲೆ ಕೂತಿರಲಿಲ್ಲ. ನಾನು ಹುಟ್ಟಿ ಬೆಳದಿದ್ದು ಮಾಡಿ ಮೇಲಲ್ಲವಲ್ಲಾ, ನಾನು ಗ್ರಾಮಗಳಲ್ಲಿ ಓಡಾಡಿದ್ದೇನೆ, ಬಡತನಾನ ಕಂಡಿದ್ದೇನೆ. ಉಂಡಿದ್ದೇನೆ ಎಲ್ಲಾ ಬಲ್ಲೆ ನಾನು. ಇದರ ಹಾಗೆ ನೀವು ಮಾಡಿಯಪ್ಪಾ ಅಂತ ಹೇಳ್ತೀನೆ ನಾನು, ಬಡತನಾನ ನೋಡಿ, ಸ್ವಲ್ಪ ಹಳ್ಳಿಗಳಿಗೆ ಹೋಗಿ ಜನವನ್ನ ಕಾಣಿ, ಅವರು ಬಾಳುತ್ತಿರೋ ರೀತಿಯನ್ನು ನೋಡಿ. ಬೆಂಗಳೂರಿನ ಯಾವುದಾದರೂ ಒಂದು ಕಟ್ಟಡ, ಒಂದು ಬೀದಿ, ಜೀವನಾನ ವರ್ಣಿಸ್ತೇನೆ ಅಂದರೆ ಅಲ್ಲಿಗೆ ಹೋಗಿ ಜನದೊಂದಿಗೆ ನಾಲ್ಕು ದಿವಸ ಓಡಾಡಿ, ಹಾಗೆಂತ ಹೇಳ್ತೀನೆ ನಾನು.

ವಿ. ಸೀ : ನಿಮ್ಮ ಕತೆಗಳನ್ನು, ನಾಟಕಗಳನ್ನ, ಉಳಿದ ಗ್ರಂಥಗಳನ್ನ ನೋಡಿದರೆ ಹೆಣ್ಣು ಮಕ್ಕಳಿಗೆ ಸಂಬಂಧಪಟ್ಟಂತ ಗುಣ, ವಿಲಾಸ, ಹಿರಿಮೆ ಇರೋ ಹಾಗೆ ಕಾಣ್ತದೆ, ಎಷ್ಟು ಸಂತೋಷ ಕಾಣಿಸುತ್ತೆ....

ಮಾಸ್ತಿ : ನನಗೆ ಅದೇ ಅಂತ ಕಾಣ್ತದೆ. ನನ್ನ ಸ್ವಭಾವದಲ್ಲಿ ಹೆಣ್ಣು ಮಕ್ಕಳನ್ನ ಕಂಡರೆ ಬಹಳ ಮೆಚ್ಚಿಗೆ ಅಂತ ಕಾಣುತ್ತೆ....ಹೆ....ಹೆ....ಹೆ....ನನಗೆ ನಮ್ಮ ತಾಯಿ ಅಂದರೆ ಬಹಳ ಮರ್ಯಾದೆ. ನನ್ನ ತುಂಬಾ ಕಾಪಾಡಿ ಕೊಂಡ ಜೀವ ಅದು. ಏನೀಗ ಎರಡೇ ವರ್ಷದ ಹಿಂದೆ ತೀರಿಕೊಂಡರು. ನಾನು ಹ್ಯಾಗೆ, ನಾನು ಅವರೆದುರಿಗೆ ಒಂದು ಎಳೆ ಮಗುವಾಗಿ ಇರ್ತಾ ಇದ್ದೆ ಯಾವಾಗಲೂ ನಾನು; ಈಗ ನಾನು ಮತ್ತೇನು, ಹೆಣ್ಣು ಮಗಳು ದೊಡ್ಡೋಳು ಅಂತ ಹೇಳದೆ ಮತ್ತೇನು ಮಾಡಲಿ ನಾನು.

ನನ್ನ ಕೈ ಹಿಡಿದಾಕೆ ನನ್ನ ಸರಿಯಾಗಿ ನೋಡಿ ಕೊಂಡಿದ್ದಾಳೆ ಪಾಪ. ನನ್ನ ಮಕ್ಕಳು ಚೆಂದಾಗಿದ್ದಾರೆ. ಹೂ, ನಾನು ಇತರರ ಹೆಣ್ಣು ಮಕ್ಕಳನ್ನು ನೋಡಿದ್ದೇನೆ ತುಂಬಾ ಗುಣಶಾಲಿಗಳು ಅದರಿಂದ ಅವರ ಗುಣಾನ ಹೊಗಳಿದ್ದೇನೆ, ಹುಡುಗರನ್ನ ಯಾರನ್ನೂ ಕೆಟ್ಟವರು ಅಂತ ಹೇಳ್ಲಿಲ್ಲವಲ್ಲ (ನಗು)

ವಿ. ಸೀ : ಈಗ ಹೊಸದಾಗಿ ಬರೀತಾ ಇದ್ದಾರಲ್ಲ ಅವರಿಗೆ ಏನಾದರೂ ತಾವು ಹೇಳೋದು ಒಂದೆರಡು ಮಾತಿದೆಯಾ ?

ಮಾಸ್ತಿ : ಏನು....ಇದು....ನಾನು ಏನು ಹೇಳ್ತೀನಪ್ಪ ಬಾಳಿ ಅಂತೇನೆ, ಬರೀರಿ ಅಂತೇನೆ, ಅದಕ್ಕೆ ಏನು ಬೇಕೋ ಅದನ್ನ ಮಾಡಿಕೊಳ್ಳಿ ಅಂತೇನೆ ನೋಡಿ, ಒಳ್ಳೇದನ್ನ ಓದಿ ಒಳ್ಳೇ ಮೇಲ್ಪಂಕ್ತಿ ಇಟ್ಟುಕೊಳ್ಳಿ ಅಂತೇನೆ, ಕಷ್ಟ ಪಡಿ ಅಂತೇನೆ, ದುಡೀದೆ ಹಾಗೇ ಒಳ್ಳೇದು ಯಾವುದೂ ಸಿಕ್ಕೋದಿಲ್ಲ ದುಡೀಬೇಕು, ಕಲೀಬೇಕು, ಪ್ರಯತ್ನ ಮಾಡಬೇಕು, ಬೆಟ್ಟ ಹತ್ತೋದು, ಕೂತ ಕಡೆಯಿಂದ ಆಗೋದಿಲ್ಲ, ಏರಬೇಕು, ಮೇಲು ಸಿರಾಗಬೇಕು, ಸಾಕಪ್ಪಾ ಅಂತನ್ನಬೇಕು, ದಣಿದು ಒಂದು ಕಡ ಕೂತ್ಕೋಬೇಕು, ಸೋಲಬೇಕು, ಸೋತುಗೆಲ್ಲಬೇಕು.

ವಿ. ಸೀ : ತುಂಬಾ ಘಾಸಿ ಡಿಸಿದೆ, ಬೇಸರವನ್ನೂ ಪಡಿಸಿರಬೇಕು ಅದಕ್ಕಾಗಿ ಕ್ಷಮಿಸಬೇಕು. ವಿಷಯ ವಿಶದ ಪಡಬೇಕು ಎಂಬ ದೃಷ್ಟಿಯಿಂದ ಮಾತು ನಾನು ಕೆಲವು ಪ್ರಶ್ನೆಗಳನ್ನು ಕೇಳಿದೆ. ತಮ್ಮ ಉಪಕಾರ ದೊಡ್ಡದಾಗ, ಶುಚಿಯಾದ ಜೀವನವನ್ನು ನಡೆಸಿಕೊಂಡು ಬಂದು ಹಿರಿಯರಾಗಿ ಇದ್ದೀರಿ. ಇವತ್ತು ತಾವು ದಯಮಾಡಿ ಒಂದು ಈ ನಾಲ್ಕು ಮಾತು ಗಳನ್ನಾಡಿದ್ದಕ್ಕೆ ನಾನು ತುಂಬಾ ಕೃತಜ್ಞನಾಗಿದ್ದೇನೆ.

ಮಾಸ್ತಿ : ನಿಮ್ಮ ಪ್ರೀತಿ ದೊಡ್ಡದು. ನಾನು ದೊಡ್ಡದಾಗಿ ಕಾಣ್ತಾ ಇದ್ದೇನೆ ಮುಖ್ಯವಾದ ಮಾತದು (ನಗು)

ವಿ. ಸೀ : ಸಂತೋಷ....ಸಂತೋಷ....ಸಂತೋಷ....

ಮಾಸ್ತಿ : ನಮಸ್ಕಾರ.

# ಕತೆಗಾರರಾಗಿ, ಕವಿಯಾಗಿ ಹೆಸರು ಪಡೆದ ಮಾಸ್ತಿ

ಡಾ॥ ಬಿ. ಸಿ. ರಾಮಚಂದ್ರ ಶರ್ಮ

ಇವೊತ್ತು ಕನ್ನಡದಲ್ಲಿ ಕೆಲಸ ಮಾಡುತ್ತಿರುವ ಹಲವರಿಗೆ ಮಾಸ್ತಿಯವರು ಒಂದಲ್ಲ ಒಂದು ರೀತಿಯಲ್ಲಿ ನೆರವಾಗಿದ್ದಾರೆ. ನನ್ನನ್ನು ಕವಿಯಾಗಿ ಮಾಡಿದವರು ಅವರು-ಅವರಿಗೇ ಗೊತ್ತಿಲ್ಲದ ಹಾಗೆ.

ನನಗಾಗ ಇಪ್ಪತ್ತು. ಹಣ್ಣು ಬಿಡದ ಒಲವಿಗೆ ಸಿಕ್ಕ ನಾನು ತುಂಬ ನೊಂದಿದ್ದೆ. ಎದೆ ತುಂಬಿ ನಿಂತ ನೋವು ನುಡಿಯಾಗದೆ ತಿಳಿಯಾಗುವ ಮಾರ್ಗವಿರಲಿಲ್ಲ. ನಾನೊಂದು ಕವನ ಬರೆದೆ. ಬರೆದದ್ದು ಕಾವ್ಯವಾದರೆ ಇನ್ನಷ್ಟು ಬರೆಯುವ ಆ... ಇತ್ತು. ಕಾವ್ಯವೋ, ಅಲ್ಲವೋ ಎಂದು ತಿಳಿಯುವುದಕ್ಕೇದೇ ಮಾಸ್ತಿಯವರಿ... ಕಳಿಸಿದೆ. 'ಜೀವನ'ದಲ್ಲಿ ಪ್ರಕಟವಾದರೆ ಸರಿ. ಪ್ರಕಟವಾಗದೆ ಹೋದರೆ ... ನೋಡೋಣ.

ಆರು ತಿಂಗಳ ಅನಂತರ ಅದು ಪ್ರಕಟವಾಯಿತು. ನಾನು ಮುಂದುವರಿದ... ಕವಿಯಾದೆ. ನಾನು ಮಾಸ್ತಿಯವರಿಗೆ ಕೃತಜ್ಞ.

ಮಾಸ್ತಿಯವರನ್ನು ಕಂಡೊಡನೆ ಮನವರಿಕೆಯಾಗುವುದು ಅವರ ವಿನ... ಮೃದು ಸ್ವಭಾವ. ಅವರಷ್ಟು ನಯವಾಗಿ ಮಾತನಾಡುವವರು ಅತಿ ವಿರಳ. ಸ... ಸಣ್ಣ ದಿನ ಬಳಕೆಯ ಮಾತಿನಲ್ಲಿ ಹೇಳಬೇಕಾದ್ದೆಲ್ಲವನ್ನೂ ಹೇಳುವ ಅವರ ಶ... ಅಪೂರ್ವವಾದದ್ದು. ಈ ಸರಳತೆಯ ತೆರೆಮರೆಗೆ ಆಳವಾದ ತಿಳಿವು, ಸಮಗ್ರವಾ... ಪ್ರಪಂಚ ಜ್ಞಾನ ಮತ್ತು ನಮ್ಮ ಸಂಸ್ಕೃತಿಯ ಪಾಕವನ್ನು ಮೈಗೆ ಹತ್ತಿಸಿಕೊಂಡಿರು... ಒಂದು ಕಲೆಗಾರಿಕೆ ಇವುಗಳಿವೆ ಎಂಬುದನ್ನು ಕಾಣಬೇಕು.

ಮಾಸ್ತಿಯವರಲ್ಲಿ ಇನ್ನೊಂದು ದೊಡ್ಡ ಗುಣ ಇದೆ. ಅವರು ನಗುವುದನ್ನು ಕಲಿತವರು. ಇನ್ನೊಬ್ಬರಿಗೆ ತಿಳಿಹೇಳುವ ಮಾತಿಗೆ ನಗು ಬೆರೆತಾಗ ಮಾತು ನ... ವಾಗುತ್ತದೆ. ಕೊಂಡಿ ಹೋಗಿ ಅಸ್ಸಿಸಿಕೊಂಡವನಿಗೆ ಕೋಪ ಬರದೆ, ಮಾತ... ಸಾರ್ಥಕವಾಗುತ್ತದೆ. ಇಂಥ ಮಾತನಾಡುವುದರಲ್ಲಿ ಮಾಸ್ತಿ ಅಗ್ರಗಣ್ಯರು.

ಒಮ್ಮೆ, ಒಂದು ಸಭೆಯಲ್ಲಿ ಮಾಸ್ತಿ ಮಾತಾಡಿದರಂತೆ. ಅವರಿಗೆ ಮೊದಲ... ಎದ್ದು ನಿಂತ ಅಧ್ಯಕ್ಷ ಮಹಾಶಯರು ಇಂಗ್ಲಿಷಿನಲ್ಲಿ ಮಾತನಾಡಿದರಂತೆ. ಅವ... ಅದಕ್ಕೆ ಕೊಟ್ಟ ಕಾರಣ, ಅನೇಕರು ಕೊಡುವ ಕಾರಣ: 'ನನಗೆ ಕನ್ನಡ ಅಷ್ಟು ಚೆನ್ನಾ... ಬರುವುದಿಲ್ಲ. ನಾನು ಕನ್ನಡ ಮಾತಾಡಿದರೆ ತುಂಬ ತಪ್ಪಾಗುತ್ತೆ....' ಸರಿ, ಮಾ... ಮುಗಿಯಿತು. ಎದ್ದು ನಿಂತ ಮಾಸ್ತಿ ಹೇಳಿದರಂತೆ :

'ಕನ್ನಡದಲ್ಲಿ ಮಾತಾಡಿದರೆ ತಪ್ಪಾಗುತ್ತೆ ಎನ್ನುವವರಿಗೆ ನನ್ನದೊಂದೇ ಪ್ರಾರ್ಥನೆ: ಸ್ವಾಮಿ, ನೀವು ಇಂಗ್ಲೀಷು ಮಾತಾಡುವಾಗ ಮಾಡುವ ತಪ್ಪುಗಳನ್ನೇ ಕನ್ನಡ ಮಾತಾಡಿ ಮಾಡಿ. ಯಾರದೇನು ಅಡ್ಡಿ ಅದಕ್ಕೆ....?'

ಇದು ನಡೆಯಿತೋ ಇಲ್ಲವೋ ನನಗೆ ಗೊತ್ತಿಲ್ಲ. ಮಾಸ್ತಿಯವರು ಹೀಗೆ ಹೇಳಿದ್ದರೆ ನನಗಂತೂ ಆಶ್ಚರ್ಯವಿಲ್ಲ.

**ವಕ್ತಿತ್ವದ ಸಾರ**

ಮಾಸ್ತಿಯವರೊಡನೆ ನಾವು ಮಾತಾಡುವಾಗ ಕಾಣುವ ಈ ಎಲ್ಲವೂ-ಈ ನಯ, ನಾಜೋಕು, ಮೃದು ಹಾಸ್ಯ, ಸರಳತೆ–ಅವರ ಕಾವ್ಯದಲ್ಲಿವೆ. ಅವರ ಕಥನ-ಕವನಗಳನ್ನೋದುತ್ತಿರುವಾಗ ಅವರೇ ಎದುರು ನಿಂತು ಓದುತ್ತಿದ್ದಾರೆನಿಸುವುದಕ್ಕೆ ಇದೇ ಕಾರಣ, ಅವು ಅವರ ಎದೆಯ ಆಳದಿಂದ ಅವರ ವ್ಯಕ್ತಿತ್ವದ ಸಾರವನ್ನು ಕೂಡಿಕೊಂಡು ಬಂದಿವೆ. ಅವರು ? ನಮ್ಮ ನಾಡ ಜನದ, ಸಂಸ್ಕೃತಿಯ, ಸಾರವನ್ನು ತಮ್ಮದಾಗಿ ಮಾಡಿಕೊಂಡು ಬೆಳೆದವರು....

ಮಾಸ್ತಿಯವರಿಗೆ ಈಗ ಅರವತ್ತೈದು ವಯಸ್ಸು, 'ನನಗೀಚೆಗೆ ಮೊದಲಿನ ಹಾಗೆ ಕೂತು ಕೆಲಸ ಮಾಡುವುದು ಕಷ್ಟ. ಮನಸ್ಸಿನ ಉತ್ಸಾಹಕ್ಕೆ ಮುಪ್ಪು ಬಂದಿಲ್ಲ. ಮೈ ಒಲ್ಲದು. ಮನುಷ್ಯನಿಗೆ ಮುಪ್ಪೆಂದರೆ ಒಂದೇ-ಮೈಯಿನ ಮುಪ್ಪು."

ಅವರು ಹುಟ್ಟಿದ್ದು ಖರಸಂವತ್ಸರದಲ್ಲಿ. 'ನನ್ನದು ಹಠಮಾರಿ ಸ್ವಭಾವ. ಏಕೆ ಗೊತ್ತಾಯಿತೇ ? ಖರ ಎಂದರೆ ಹೇಸರಕತ್ತೆ.' ಹುಟ್ಟೂರು ಹೊಂಗೇನಪಳ್ಳಿ. ಅವರ ತಂದೆಯ ಸ್ಥಳ ಮಾಸ್ತಿ.

'ನಮ್ಮ ಅಜ್ಜಿಯ ಅಜ್ಜಿ ಮಹಾಸತಿಯಾದಳು. ಗಂಡ ಸತ್ತಾಗ ಬೆಂಕಿಹೊಕ್ಕ ಆಕೆಯ ನೆನಪಿಗೆ ಆಕೆಯ ಮಾವ ಊರು ಕಟ್ಟಿದನಂತೆ. ಊರಿಗೆ ಮಾಸ್ತಿಯೆಂದೇ ಹೆಸರಾಯಿತು.'

ಮಾಲೂರ ಹತ್ತಿರದ ಹಳ್ಳಿಯಲ್ಲಿ ಪ್ರೈಮರಿ ಸ್ಕೂಲು, ಮಳವಳ್ಳಿಯಲ್ಲಿ ಮಿಡಲ್ ಸ್ಕೂಲು, ಮೈಸೂರಿನಲ್ಲಿ ಹೈಸ್ಕೂಲು, ಎಫ್.ಎ., ಬೆಂಗಳೂರಿನಲ್ಲಿ ಬಿ.ಎ., ಆಮೇಲೆ ಎಂ.ಎ, ಹೀಗೆ ನಡೆಯಿತು ಅವರ ವಿದ್ಯಾಭ್ಯಾಸ. ಹದಿನೈದನೇ ವಯಸ್ಸಿಗೇ ಬೃಹತ್ಕಾದಂಬರಿಯೊಂದನ್ನು ಪ್ರಾರಂಭ ಮಾಡಿದರು. ಅವರ 'ಕೆಲವು ಸಣ್ಣ ಕತೆಗಳು' ಬೆಳಕು ಕಂಡಿದ್ದು ೧೯೨೦ರಲ್ಲಿ. ಮಾಸ್ತಿಯವರಿಗೆ ಆಗ ಮೂವತ್ತರ ಪ್ರಾಯ ಕನ್ನಡಕ್ಕೆ ಸಣ್ಣ ಕತೆಯನ್ನು ಕೊಟ್ಟ ಮಾಸ್ತಿ ಕಥಾರಚನೆಯಲ್ಲಿ ಇಂಗ್ಲಿಷಿನ ಯಾವ ಕತೆಗಾರರಿಂದಲೂ ಪ್ರಭಾವಿತರಾಗಲಿಲ್ಲವೆಂದೇ ಹೇಳಬೇಕು. ಸ್ಕಾಟ್, ಡಿಕೆನ್ಸ್ ಅವರ ಕಾದಂಬರಿಗಳಲ್ಲಿ, ಪ್ರಾಸಂಗಿಕವಾಗಿ ಬರುವ 'ಸ್ಟ್ರಾಂಡ್' ಪತ್ರಿಕೆಯಲ್ಲಿ ಪ್ರಕಟವಾಗುತ್ತಿದ್ದ ಸಣ್ಣ ಕತೆಗಳನ್ನುಳಿದು ಬೇರೆ ಯಾವುದನ್ನೂ ಓದಿದ ನೆನಪಿಲ್ಲ ಅವರಿಗೆ.

'ನಿಮ್ಮ ಮೊದಲ ಕತೆಗಳನ್ನು ಈಗ ಓದಿಕೊಂಡಾಗ ಏನನ್ನಿಸುತ್ತೆ ?' ನಾನು ಕೇಳಿದೆ.

'ಗಯುಟೆ ಒಂದು ಸಲ ಕೈಗೆ ಸಿಕ್ಕಿದ ಯಾವುದೋ ಪತ್ರಿಕೆಯನ್ನು ಎತ್ತಿಕೊಂಡು ಓದತೊಡಗಿದನಂತೆ. ಅದರಲ್ಲಿದ್ದ ಒಂದು ಪ್ರಬಂಧವನ್ನೋದುತ್ತಿದ್ದಾಗ 'ಪರವಾಗಿಲ್ಲ' ಎನಿಸಿತಂತೆ. ಕೊನೆಗೆ ಬಂದಾಗ ತಾನೇ ಬರೆದದ್ದು ಅದು ಎಂದು ಕಂಡುಕೊಂಡನಂತೆ. ನನ್ನ ಕೆಲವು ಕತೆಗಳು ನನಗೆ ಅದೇ ಅನುಭವವನ್ನು ಕೊಟ್ಟಿವೆ. ವಯಸ್ಸಾದ ಹಾಗೆ ಅನುಭವ ಹೆಚ್ಚಾಗಿ ವ್ಯಕ್ತಿತ್ವ ಬೆಳೆಯುತ್ತಾ ಹೋಗುತ್ತದೆ. ನನ್ನ ಮೈಮೇಲೆ ಈಗಿರುವ ಚರ್ಮ ನಾನು ಹುಟ್ಟಿದಾಗ ಇದ್ದದಲ್ಲ, ಅಲ್ಲವೇ....? ಕೆಲವು ಕತೆಗಳನ್ನು ನಾನು ಈಗ ಓದಿದಾಗ ಇವೊತ್ತು ನಾನು ಬರೆದರೆ ಹಾಗೆ ಬರೆಯುತ್ತಿರಲಿಲ್ಲ ಅನ್ನಿಸಿದೆ.'

'ನೀವು ಕತೆಗಳನ್ನು ಮೊದಲು ಬರೆದಿರ ? ಅಥವಾ ಕವಿತೆಯನ್ನೊ ?'

'ಕತೆಗಳನ್ನು ಬರೆಯುತ್ತಿದ್ದ ಆ ಕಾಲಕ್ಕೆ ಕವಿತೆಯನ್ನೂ ಬರೆಯುತ್ತಿದ್ದೆ.'

ಎಂದರೆ ಮಾಸ್ತಿಯವರು ಮೂವತ್ತೈದು ವರುಷಗಳಿಂದ ಕವಿತೆ ಬರೆಯುತ್ತಿದ್ದಾರೆ. ಅವರು ಇದುವರೆಗೆ ಬರೆದಿರುವ ಪುಸ್ತಕಗಳ ಸಂಖ್ಯೆ ಐವತ್ತಕ್ಕೂ ಹೆಚ್ಚು. ಈ ಐವತ್ತರಲ್ಲಿ ಕವನ ಸಂಕಲನಗಳು ಹದಿಮೂರು. ಕಥಾ ಸಂಕಲನಗಳು ಒಂಬತ್ತು, ಎರಡು ಕಾದಂಬರಿಗಳೂ ಇವೆ. ಉಳಿದವಲ್ಲಿ ಕೆಲವು ವಿಮರ್ಶಾಗ್ರಂಥಗಳು, ಕೆಲವು ವಿಚಾರ ಪ್ರಧಾನ ಪ್ರಬಂಧಗಳು, ಉಳಿದವು ನಾಟಕಗಳು-ಪದ್ಯನಾಟಕಗಳು, ಗದ್ಯ ನಾಟಕಗಳು....ವಿಪುಲವಾದ ಇವರ ಸಾಹಿತ್ಯ ಸೃಷ್ಟಿಯನ್ನು, ಆ ಸಾಹಿತ್ಯದಲ್ಲಿನ ಗುಣ ಸಂಪದವನ್ನು ಕಂಡವರಿಗೆ ಮಾಸ್ತಿಯವರ ಮಾತು ನಿಜವೆನಿಸೀತು ; ಮನಸ್ಸಿಗೆ ಮುಪ್ಪಿಲ್ಲ.

**ಬಿನ್ನಹ**

ಮಾಸ್ತಿಯವರ ಮೊದಲ ಕವನ ಸಂಗ್ರಹ 'ಬಿನ್ನಹ' ಪ್ರಕಟವಾದದ್ದು ೧೯೨೨ರಲ್ಲಿ. ಕವಿಯ ಮನಸ್ಸಿನ ಒಂದು ಮುಖ-ಆ ಮುಖದ ಮೇಲೆ ಕಾಲದಿಂದ ಕಾಲಕ್ಕೆ ಸುಳಿಯುವ ಹತ್ತಾರು ಭಾವಗಳು, ಇಲ್ಲಿ ಮೂಡಿಕಂಡಿವೆ. ದೇವರಿದ್ದಾನೆ, ಬಾಳಿಗೆ ಬರುತ್ತಾನೆ ಎಂದು ಪೂರ್ಣವಾಗಿ ನಂಬಿದ ಭಕ್ತನ ಶ್ರದ್ಧೆಯೂ ಕೂಡ ಒಂದೊಂದು ಸಲ ಸಂದೇಹಕ್ಕೆ, ವ್ಯಾಕುಲಕ್ಕೆ ಚಿಂತೆಗೆ ಅವಕಾಶ ಮಾಡಿಕೊಡುತ್ತದೆ.

ಅರಸನೀ ದಾರಿಯಲಿ ಬರುವನೆಂದರು ಅವರು
ಬರಲಿಲ್ಲವೇಕೆ ಇನ್ನೂ ?
ಬರಿಯ ಮಾತನು ಹೇಳಿ ಮರುಳು ಮಾಡಿದರೇನೋ ?
ಬರಲಿಲ್ಲವೇಕೆ ಇನ್ನೂ ?

ಬೆಳಗಿನಿಂದ ಬೈಗಿನವರೆಗೆ ಅರಸ ಬರುವನೆಂದು ಬೀದಿ ಮಗ್ಗುಲಲ್ಲಿ ಕಾದ ಜೀವನೊಂದು ಕೇಳುತ್ತದೆ : ದೊರೆ ಇಹನೋ ಇಲ್ಲವೋ, ಅವರೇನ ಪೇಳ್ದರೋ? ಅಥವಾ ಭಕ್ತ ನಿದ್ದೆಯಲ್ಲಿದ್ದಾಗ ಬಂದು ಹೋದನೇ ? ದೇವರು ಹೀಗೆ ಮಾಡಬಹುದೆ ?

ಅರೆ ನಿದ್ದೆಯಲಿ ಮೈಯು ಮರೆದಿಹ ಸಮಯದಿ
ಹರಿ ನೀ ಬಂದೆನ್ನ ಕೆಲದೊಳು ಕುಳಿತು
ಕರುಣದಿ ನಿನ್ನ ಕೆಳೆಯನೆನ್ನೊಳಿಟ್ಟು ಕಣ್
ತೆರೆವ ಮುನ್ನ ಮರೆಯಾಗುತೆ ಇಂತು
ಇಂತು ಬಂದು ಪೋಪರೆ ?

ದೇವರ ಈ ಆಟವನ್ನು ನೋಡಿ ನಂಬಿಕೆ ನಲುಗಿದಾಗ ಕವಿ ಕೇಳಿಕೊಳ್ಳುತ್ತಾನೆ.

ಎಲ್ಲವೂ ಒಳ್ಳೆಯದಾಗುವುದೆಂದು
ನಂಬಿಕೆಯನು ನೀಡು

ಇಂಥ ನಂಬಿಕೆ ಕವಿಗೆ ಬಂದದ್ದು ಅವರ ಕಾವ್ಯದುದ್ದ ಕಾಣುತ್ತದೆ. ನಮ್ಮೆಲ್ಲರನ್ನೂ ಸಲಹುವ ಕರುಣಾಮಯ ಮೇಲಿದ್ದಾನೆ. ನಮಗೆ ಒಳ್ಳೆಯದಾಗುವುದು ಎಂಬ ನಂಬಿಕೆ ಮಾಸ್ತಿಯವರ ಕಾವ್ಯದಲ್ಲಿ, ಅವರ ಕಥನ ಕವನಗಳ ಹಲವಾರು ಪಾತ್ರಗಳ ಮಾತಿನಲ್ಲಿ, ಮೂಡಿ ಕಾಣುವುದು.

ಬಿನ್ನಹದ ಕೆಲವು ಕವನಗಳಲ್ಲಿ ರವೀಂದ್ರನಾಥರ ಗೀತೆಗಳ ಭಾವವೇ ನುಡಿ ಕಂಡಿದೆ. ಅವರ 'ನಿದ್ದೆ' ಕವನವನ್ನು ಓದಿದಾಗ ಟಾಗೂರರ 'He came and sat by my side, but I woke not....' ಸಾಲುಗಳು ನೆನಪಿಗೆ ಬರುವುದು ಸಹಜ.

**ಅರುಣ**

ಮಾಸ್ತಿಯವರ ಎರಡನೆಯ ಕವನ ಸಂಕಲನ 'ಅರುಣ' ಪ್ರಕಟವಾದದ್ದು ೧೯೨೪ರಲ್ಲಿ.

ಕವಿಯ ಕಣ್ಣು ಸುತ್ತಣ ಪ್ರಪಂಚವನ್ನು ನೋಡುವುದನ್ನು ಕಲಿತಿದೆ ಎನ್ನುವುದು ಈ ಸಂಕಲನದಲ್ಲಿ ಕಾಣುತ್ತದೆ. ಬಿನ್ನಹದ ಬಹುಪಾಲು ಕವನಗಳ ಸ್ಫೂರ್ತಿ ಮೂಲ ಕವಿಯ ವಯಸ್ಸಿನ ಕ್ಷೋಭೆ, ಶ್ರದ್ಧೆ ಅಶ್ರದ್ಧೆಗಳ ಗೊಂದಲವಾದರೆ ಇಲ್ಲಿ ಸುತ್ತಣ ಪ್ರಪಂಚ ಕವಿಯನ್ನು ಕೆರಳಿಸಿ ನುಡಿಯುವಂತೆ ಮಾಡಿರುವುದನ್ನು ಕಾಣುತ್ತೇವೆ. ಪಾಳುಬಿದ್ದ ಊರು, ಭಯಪಟ್ಟ ಅಳಿಲು, ಬೆಳಗು, ತಂಗಾಳಿಗಳೂ ಸ್ಥಳಗಳ ಹೆಸರುಗಳನ್ನು ಕುರಿತಾದ ಕವಿಯ ವಿಚಾರಧಾರೆಯೂ, ಕವನಗಳನ್ನು ಬರೆಸಿವೆ. 'ಸ್ಥಳಗಳ ಹೆಸರು' ಅನ್ನುವ ಮಾಸ್ತಿಯವರ ಕವನ ಅನೇಕ ಕಾರಣಗಳಿಂದಾಗಿ ಗಮನಾರ್ಹ. ಆಮೇಲಿನ ಕಥನ ಕವನಗಳಲ್ಲಿ ಸುಸ್ಪಷ್ಟವಾಗಿ ಕಂಡುಬರುವ ಕವಿಯ

ಸ್ವಭಾವ, ಮಾತಿನ ರೀತಿ, ಒಂದು ವಿಷಯವನ್ನು ಹೇಳುವ ತರಹ ಇವುಗಳೆಲ್ಲದರ ಬೀಜವನ್ನೂ ಈ ಕವನದಲ್ಲಿ ಕಾಣಬಹುದು.

ನಮ್ಮ ಸೀಮೆಯ ಕೆಲವು ಊರ ಹೆಸರಿನ ಅರ್ಥ
ಬಹು ರಮ್ಯವಾಗಿ ಬಹು ಭಾವಗರ್ಭಿತವಾಗಿ
ರಸಪುಷ್ಟವಾಗಿಹವು....

ಹೀಗೆ ಮೊದಲಾಗುವ ಈ ಕವನ ಕೆಲವೊಂದು ಸ್ಥಳಗಳ ಹೆಸರುಗಳ ಹಿಂದೆ ಏನು ನಡೆದಿರಬಹುದು ಎಂದು ಹೇಳುತ್ತದೆ.

ಲೇಪಾಕ್ಷಿಯ ಮಾತಾಡುತ್ತ ಈ ಮಾತು ಬರುತ್ತದೆ. ಲೇಪಕ್ಷಿ ಎಂದರೆ ತೆಲುಗು. ಏಳು ಪಕ್ಷಿ ಎಂಬುದೇ ಇದರ ಅರ್ಥ. ರಾಮ ಜಟಾಯುವನ್ನು ಕಂಡು ಹೇಳಿದ ಈ ಮಾತನ್ನು. ಸರಿ....

'ಈ ಕತೆಯು ಕೇಳಿ ಯಾರೂ ರಾಮ ದೇವರು
ತೆಲುಗು ಮಾತಾಡುತ್ತಿದ್ದರೆ ಎಂದು ಕೇಳದಿರಿ'

ಒಂದು ವೇಳೆ ಕೇಳಿದಿರಿ. ಉತ್ತರ ಹೇಳುವುದು ಕಷ್ಟವಲ್ಲ—

'ನಿಮಗೆ ನಮಗೆರಡು ಮೂರೇ ಮಾತು ಬರಬಹುದು
ದೇವರಿಗೆ ಬಾರದಿಹ ಮಾತುಂಟೆ ?'

ತೆಲುಗು ನಾಡಿನ ಹಕ್ಕಿಯನ್ನೆಬ್ಬಿಸುವುದಕ್ಕೆ ರಾಮ ತೆಲುಗನ್ನಾಡಿದ ಅನ್ನಿ !

ಚಮತ್ಕಾರದ ಮಾತನ್ನಾಡಿ ಹೊಸತೊಂದು ಅರ್ಥವನ್ನು. ಸಾಮಾನ್ಯವಾಗಿ ಕಾಣಿಸದೆ ಹೋಗಬಹುದಾದೊಂದು ಹೊನ್ನಹರವನ್ನು ಸೂಚಿಸುವ ಮಾಸ್ತಿಯವರ ಜಾಣತನದ ತೊಡಲು ಇಲ್ಲಿದೆ. ಮನೆ ಮಾತನ್ನು ಬಳಸಿಕೊಂಡು ದೊಡ್ಡ ದೊಡ್ಡ ತತ್ವ ವಿಚಾರಗಳನ್ನಾಗಲಿ ಮನಮುಟ್ಟುವಂತೆ ಹೇಳುವ ಅವರ ಕಲಾಗಾರಿಕೆಯ ಮೊದಲ ಹೆಜ್ಜೆ ಇಲ್ಲಿದೆ.

**ತಾವರೆ**

ಮೂರನೆಯ ಸಂಕಲನ 'ತಾವರೆ' ಬಂದಿದ್ದು ೧೯೩೦ರಲ್ಲಿ, ಈ ಆರು ವರ್ಷಗಳಲ್ಲಿ ಕವಿ ತಮ್ಮ ಅನುಭವಗಳಿಗೆ ತಕ್ಕುದಾದ ಭಾಷೆಯನ್ನು ಸಿದ್ಧಪಡಿಸಿಕೊಳ್ಳುವ ಕಷ್ಟದ ಕೆಲಸದಲ್ಲಿ ಎಷ್ಟೊಂದು ಮುಂದುವರಿದಿದ್ದಾರೆ ಎನ್ನುವುದು ಇಲ್ಲಿ ಸ್ಪಷ್ಟವಾಗಿದೆ. ವಸ್ತು ವೈವಿಧ್ಯದ ದೃಷ್ಟಿಯಿಂದಲೂ ಈ ಕವನಸಂಕಲನ ಗಮನಾರ್ಹವಾಗಿದೆ. ಆ ದಿನಗಳಲ್ಲಿ ಕವಿಗಳೆಲ್ಲರಿಗೂ ಅನಿವಾರ್ಯವೇನೋ ಎನ್ನಿಸುವಂತಹ "ಮಾಂಬಿ" ಕವನ ಈ ಸಂಕಲನದಲ್ಲಿದೆ. ಈ ತರಹದ ಕವನಗಳಿಗೆ "ಮಾಂಬಿ"ಯೇ ಮೇಲ್ಪಂಕ್ತಿಯಾಯಿತೋ ಏನೋ !

'ಕನಕದಾಸರ ಕಥೆಗಳು' ಕವನದಲ್ಲಿ ಈ ಮಾತಿದೆ.

'..........ಇವುಗಳೊಳೆಲ್ಲ
ಹಿರಿಹಿರಿಯ ತತ್ವ ದಿನದಿನದ ಕಿರಿ ಮಾತಿನಲಿ
ಹಸುಳೆಯಲಿ ಜೀವಾತ್ಮನಡಗಿದವೊಲಡಗಿಹವು,'

## ನವರಾತ್ರಿ

ಇಂಥ ತತ್ವವನ್ನು ಹುಡುಕಿ, ಹಿಡಿದೆತ್ತಿ ತೋರುವುದನ್ನು ತಮ್ಮ ಬಾಳಗುರಿಯನ್ನಾಗಿ ಮಾಡಿಕೊಂಡರೇನೋ ಮಾಸ್ತಿಯವರು! 'ನವರಾತ್ರಿ' ಕಥನ ಕವನಗಳ ಗುಚ್ಛ. ಐದು ಭಾಗಗಳಲ್ಲಿ ಪ್ರಕಟವಾಗಿರುವ ಈ ಗುಚ್ಛದ ಬಹುಪಾಲು ಕವನಗಳಲ್ಲಿ ನಾವು ಕಾಣುವುದು ಇದನ್ನು. ನೆರೆಹೊರೆಯ ನಮ್ಮ ನಿಮ್ಮಂತಹವರಲ್ಲಿ ಅಡಗಿರುವ ಉದಾತ್ತತೆ, ಸಾಮಾನ್ಯರೆನಿಸುವಂಥ ಜನರಲ್ಲಿರುವ ಧರ್ಮಶ್ರದ್ಧೆ, ನ್ಯಾಯಬುದ್ಧಿ, ತ್ಯಾಗ, ದೈವತ್ವದ ಅಂಶ-ಇವುಗಳೇ ಕವಿಯ ವಸ್ತು; ಕಣ್ಣಿಟ್ಟು ನೋಡಿದಲ್ಲದೆ ಕಾಣದೇ ಹೋಗುದ ಈ ದೊಡ್ಡತನಕ್ಕೆ ಕನ್ನಡಿಯಾಗುವಂತಹ ಘಟನೆಗಳನ್ನು ಚಿತ್ರಿಸುತ್ತವೆ ಈ ಕಥನ ಕವನಗಳು. ಮಾನವ ಸ್ವಭಾವದ ಇದೊಂದು ಮುಖವನ್ನು ಚಿತ್ರಿಸಿದರೇ ಸತ್ಯವನ್ನು ಸಮಗ್ರವಾಗಿ ಚಿತ್ರಿಸಿದ ಹಾಗಾಯಿತೆ? ಇಲ್ಲವೆನ್ನುವುದು ಮಾಸ್ತಿಯವರಿಗೆ ಗೊತ್ತು. ಮನುಷ್ಯನ ಮೌಢ್ಯ-ಸಣ್ಣತನಗಳನ್ನು ಹೇಳುವ ಕವನಗಳಿವೆ, ಈ ಗುಚ್ಛದಲ್ಲಿ. ಅಗಡಿಯ ಸಾಧುಗಳ ಹತ್ತಿರವೇ ಅರಿಗ ನಿದ್ದಾನೆ. ಮುಸಿಲಮ್ಮ, ಜೀನಿ ಡಿ. ಆರ್ಕ್ ಆವರ ಮಗ್ಗುಲಿಗೆ ರಾಣಿ ಲಕ್ಷ್ಮಲೆ ಇದ್ದಾಳೆ-ಅಸೂಯೆಯ ಪ್ರತೀಕವಾಗಿ. ಒಳ್ಳಿತು, ಕೆಟ್ಟದು ಇವೆರಡರಲ್ಲಿ 'ಹೀಗೂ ಉಂಟೆ?' ಅನ್ನಿಸುವ ಹಾಗೆ ಕೆಲವೊಮ್ಮೆ ಮನುಷ್ಯ ಸ್ವಭಾವ ವ್ಯಕ್ತವಾಗುವದಲ್ಲವೇ? ಮನುಷ್ಯನಿಗೂ ಸಾಧ್ಯವಾಗದ ಕೆಚ್ಚು, ಒಲವು ಪ್ರಾಣಿಗೆ. ಸಾಧ್ಯವಲ್ಲವೇ? 'ರಾಮಪ್ರೀಯ ಉದನ್ತ' 'ವೀರ ಲಕ್ಷ್ಮಮ್ಮ' 'ಗೌಡರ ಮಲ್ಲಿ'ಯಂತಹ ಕವನಗಳಲ್ಲಿ ಮಾಸ್ತಿಯವರು ತಾವು ಸೃಷ್ಟಿಸುವ ಪಾತ್ರಗಳ ಮೂಲಕ ತಾವು ಯಾವುದಕ್ಕೆ ಬೆಲೆ ಕೊಡುತ್ತಾರೆ, ಯಾವುದಕ್ಕೆ ಅಲ್ಲ ಎನ್ನುವುದನ್ನು ಸೂಚಿಸುತ್ತಾರೆ.

ಮನುಷ್ಯ ಸ್ವಭಾವದ ಹತ್ತು ಮುಖಗಳ ಮೇಲೆ ಬೆಳಕು ಚೆಲ್ಲುತ್ತವೆ ಈ ಕವನಗಳು. ಅಷ್ಟೇ ಸಾಕೇ ಉತ್ತಮ ಕಾವ್ಯವಾಗುವುದಕ್ಕೆ? ಈ ಪ್ರಶ್ನೆ ಏಳುವುದು ಸಹಜವಾದರೂ ಉತ್ತರ ಹೇಳುವುದು ಕಷ್ಟ. ಕೆಲವೊಂದು ಕಡೆ ಸಾಧಾರಣವಾದ ಕನ್ನಡ ಮಾತುಗಳು ಎಷ್ಟೊಂದು ಸಾಧಿಸಿವೆ ಎಂದು ನೋಡಿದಾಗ ಎದೆ ಸಂತೋಷದಲ್ಲಿ ಅರಳುತ್ತವೆ. ಆಡು ಮಾತಿನ ನಡೆಯನ್ನು ಎಷ್ಟೊಂದು ಯಶಸ್ವಿಯಾಗಿ ಬಳಸಿದ್ದಾರೆ ಎನ್ನುವುದನ್ನು ನೋಡಿದಾಗ ಎದೆ ಉಬ್ಬುತ್ತದೆ. ಕೆಲವೊಂದು ಕಡೆ ಪದ್ಯ ಸರಳವಾಗುತ್ತ ಆಗುತ್ತ ಬಂದು ಕೊನೆಗೆ ಗದ್ಯವಾಗುವುದನ್ನು ಕಂಡಾಗ ಮೊದಲ ಮೆಚ್ಚುಗೆ ತಿಳಿಯಾಗುತ್ತದೆ. ಮಾಸ್ತಿಯವರು ಈ ಕಥನ ಕವನಗಳಲ್ಲಿ ಸಾಧಿಸಿರುವ

ಯಶಸ್ಸು ಕತೆಗಾರನಾಗಿಯೇ ಎಂದು ಕೇಳಿಕೊಂಡಾಗ ಕೆಲವೊಮ್ಮೆಯಂತೂ ಉತ್ತ
ಸುಲಭ. ಕತೆಗಾರ ಗೆದ್ದಿದ್ದಕ್ಕೆ ಕವಿಯು ಬೆನ್ನು ತಟ್ಟಬಾರದು ತಾನೇ?

ಇವುಗಳನ್ನು ನಾನು ಅತಿ ಶ್ರೇಷ್ಠ ಕಾವ್ಯವೆನ್ನಲಾರೆ. ಕತೆ ಮಾಡುವ ಕೆಲ ಕವಿತೆಯದಲ್ಲ, ಕವಿತೆಗೇ ಒಂದು ವಿಶಿಷ್ಟವಾದ ಧರ್ಮವಿದೆ, ಬದುಕಿದೆ ಎಂದೇ ನಂ ರುವ ನಾನು ಇಷ್ಟನ್ನು ಮಾತ್ರ ಧೈರ್ಯವಾಗಿ ಹೇಳಬಲ್ಲೆ; ಇವು ಉತ್ತಮ ಕಾವ್ಯ ಪ್ರಕೃತಿ ವರ್ಣನೆ, ಮನುಷ್ಯ ಸ್ವಭಾವ, ತತ್ವ ವಿಚಾರಗಳನ್ನು ಈ ಹದದಲ್ಲಿ ಬೆರಸಿ ಕಾವ್ಯದ ಕಾಲು ಯಾವುತ್ತೂ ನೆಲದಲ್ಲಿರುವಂತೆ ನೋಡಿಕೊಂಡ ಮಾಸ್ತಿಯವರ ಈ ಕವನಗಳು ಉತ್ತಮ ಕಾವ್ಯ. ಉತ್ತಮ ಕವಿಗಳಾದ ಅನೇಕರು ತಮ್ಮ ಕಾವ್ಯವನ್ನು ಸಿದ್ಧಾಂತವೊಂದರ ಅಡಿಯಾಳಾಗಿ, ಸಾಲಗೆಯಾಗಿ ನಿಲ್ಲಿಸಿದ ದಿನಗಳಲ್ಲಿ ಕಾವ ವಸ್ತುವಿಗೆ ಈ ಪ್ರಪಂಚದ ಸ್ಥಾನವಿನ್ಯಾಸದ ಮಾನಗಳನ್ನಿಟ್ಟು ಅಭಿವ್ಯಕ್ತಿ ಕೊಟ್ಟ ಕೀರ್ತಿ ಮಾಸ್ತಿಯವರದ್ದು. ಅರಗಿಸಿಕೊಳ್ಳದ, ಅರ್ಧ ಅರಗಿಸಿಕೊಂಡ ಆಧ್ಯಾತ ವನ್ನು ಜನದ ಮೇಲೆ ಹೇರದೆ ಪೂರ್ಣವಾಗಿ ಅರಗಿಸಿಕೊಂಡ ಧರ್ಮವನ್ನು ನುಡಿದ ಕೀರ್ತಿ ಮಾಸ್ತಿಯವರದ್ದು. ಪಾತ್ರಗಳನ್ನು ಸೃಷ್ಟಿಸುವ ಜಾಣ್ಮೆ ಪ್ರತಿಮೆಗಳನ್ನು ಸೃಷ್ಟಿಸುವುದರಲ್ಲಿ, ಚಿತ್ರಗಳನ್ನು ಕೊಡುವುದರಲ್ಲಿ ಕಂಡುಬಂದಿದ್ದರೆ ಮಾಸ್ತಿಯವರ ಕಾವ್ಯ ಶ್ರೇಷ್ಠ ಕಾವ್ಯವಾಗುತ್ತಿತ್ತು ಎನ್ನುವುದರಲ್ಲಿ ಸಂದೇಹವಿಲ್ಲ.

ಅದಾದ ಮೇಲೆ ಪ್ರಕಟವಾದದ್ದು 'ಮಲಾರ'-ಅಷ್ಟ ಷಟ್ಪದಿಗಳ ಸಂಕಲನ. ಕಾವ್ಯದ ಬಗೆಗೆ ಜನ ಟೀಕೆ ಮಾಡಿದಾಗ ಕವಿ ಆ ಟೀಕೆಗಳಿಗೆ ಇಲ್ಲಿಯ ಕೆಲವು ಕವನ ಗಳ ಮೂಲಕ ಸಮಾಧಾನವನ್ನು ಹೇಳಿದ್ದಾರೆ. ಇನ್ನೂ ಕೆಲವು ಕವನಗಳಲ್ಲಿ ಕವಿ ಹಿರಿಯ ವ್ಯಕ್ತಿಗಳ ಬಗೆಗೆ ತಮಗಿರುವ ಮೆಚ್ಚುಗೆಯನ್ನು ನುಡಿದಿದ್ದಾರೆ. ಕೆಲವೊಂದು ಸಂದರ್ಭಗಳೇ ಕಾರಣವಾಗಿ ಕವಿಯ ಮನಸ್ಸು ಕೆರಳಿ ಬರೆದ ಕವನಗಳೂ ಇವೆ ಇಲ್ಲಿ. ಅಷ್ಟ ಷಟ್ಪದಿಗಳನ್ನು ಹಲವಾರು ಕವಿಗಳು ಬರೆದಿದ್ದಾರೆ. ಕನ್ನಡದಲ್ಲಿ. ಉಳಿದ ಕವಿ ಗಳ ಅಷ್ಟಷಟ್ಪದಿಗಳಿಂದ ಇವು ಭಿನ್ನವಾಗಿ ಕಾಣುವುದು ಒಂದಂಶದಲ್ಲಿ. ಈ ಪ್ರಕಾರಕ್ಕೆ ಸಂಸ್ಕೃತ ಭೂಯಿಷ್ಠವಾದ ಭಾಷೆ ಅನಿವಾರ್ಯವೋ ಅನ್ನಿಸುವಂತಿದೆ ಉಳಿದ ಕೆಲವರ ಕವನಗಳು. ಹಾಗೇನಿಲ್ಲ, ಈ ಬಂಧದ ಎಲ್ಲ ಮರ್ಯಾದೆಗಳನ್ನು ಉಳಿಸಿ ಕೊಂಡೂ ಕನ್ನಡದ ಮಾತುಗಳಲ್ಲಿ ಬರೆಯುವುದು ಸಾಧ್ಯ, ಚೆನ್ನ ಎಂದು ತೋರಿಸು ತ್ತವೆ ಈ ಕವನಗಳು. ಅಗತ್ಯವಾದಷ್ಟು ವಿಚಾರವನ್ನೊಳಗೊಂಡು, ಅತಿ ಸರಳತೆಗೆ ಎಡೆಗೊಡದೆ ಇರುವ ಇಲ್ಲಿಯ ಕೆಲವಂತೂ ಕನ್ನಡಕ್ಕೆ ಉತ್ತಮ ಕಾಣಿಕೆ. ಜೀವ ರೇಶಿಮೆಯ ಹುಳು, ಶ್ರೀ ಬೇಂದ್ರೆಯವರನ್ನು ಕುರಿತು, ಹೃದಯ ಮರುಭೂಮಿ, ಕಾಳಿದಾಸನಿಗೆ, ಇತ್ಯಾದಿ ಅಷ್ಟಷಟ್ಪದಿಗಳು ಅತ್ಯುತ್ತಮವಾದವು.

'ಮಲಾರ' ಪ್ರಕಟವಾದದ್ದು 1945ರಲ್ಲಿ. ಅದರಿಂದಾಚೆಗೆ ಬಂದವು 'ಗೌಡರ ಮಲ್ಲಿ', ,ರಾಮನವಮಿ' ಮತ್ತು 'ಮೂಕನ ಮಕ್ಕಳು' —ಕಥನ ಕವನಗಳು.

೧೯೪೪ರಲ್ಲಿ ಪ್ರಕಟವಾದ 'ಸುನೀತ' ದಲ್ಲಿ ಕಥನ ಕವನಗಳೆನಿಸಿಗೊಳ್ಳದ ಕೆಲವು ಸ್ವಭಾವೋಕ್ತಿಗಳಿಗೆ. ಇವಕ್ಕೆ ಸ್ಫೂರ್ತಿ ಯಾರಾದರೂ ಆಡಿದ ಚಮತ್ಕಾರದ ಮಾತು, ಇದರಿಂದ ಸ್ಫುರಿಸುವ ಮನುಷ್ಯ ಸ್ವಭಾವದ ಒಂದು ಮುಖ. ಈ ಸಂಕಲನದಲ್ಲಿ 'ಕಲ್ಪಾಂತ?' ಎನ್ನುವ ಒಂದು ಅಷ್ಟಪಟ್ಪದಿಯಿದೆ. ದೇವರಲ್ಲಿ ಎಂಥ ಶ್ರದ್ಧೆ ಯಿದ್ದರೂ ಸುತ್ತಣ ಪ್ರಪಂಚದ ಕುರೂಪವನ್ನು ನಿಟ್ಟಿಸಿದಾಗ ಕಹಿಮಾತು ಹೇಗೆ ತಾನೇ ತಾನಾಗಿ ಬರುವುದೆಂಬುದಕ್ಕೆ ಇದು ಸಾಕ್ಷಿ. ಈ ಕವನದಲ್ಲಿ ವ್ಯಕ್ತವಾಗಿರುವ ನೈರಾಶ್ಯ, ನೋವು, ಅದರ ಮುಂದಿನ ಕವನವಾದ 'ವಿಪಿನ ವಿಹಾರಿ' ಯಲ್ಲಿರುವ ವ್ಯಂಗ್ಯ ಎದೆಯನ್ನು ಝಗ್ಗೆನಿಸುತ್ತದೆ. ಮಾಸ್ತಿಯವರಿಂದ ನಾವು ಸಾಮಾನ್ಯವಾಗಿ ನಿರೀಕ್ಷಿಸಲಾಗದಂತಹ ಕವನಗಳು ಇವು, ತುಂಬ ಶಕ್ತಿಯುತವಾಗಿದೆ.

**ಯಶೋಧರಾ**

'ನವರಾತ್ರಿಯ' ಐದು ಭಾಗಗಳು ಪ್ರಕಟವಾಗಿದ್ದು ೧೯೪೮ರ ವರೆಗಿನ ಐದಾರು ವರ್ಷಗಳಲ್ಲಿ. ಅವುಗಳಲ್ಲಿ ಎಲ್ಲವೂ ಕಥನ ಕವನಗಳ. ಇದಲ್ಲದೆ ಪ್ರಕಟವಾಗಿವೆ ಅವರ ಪದ್ಯ ನಾಟಕಗಳು-ಅಗ, ಈಗ. ಮಾಸ್ತಿಯವರ ಮನುಷ್ಯ ಸ್ವಭಾವದ ಜ್ಞಾನ ಎಷ್ಟು ಆಳವಾದದ್ದು ಎನ್ನುವುದಕ್ಕೆ ಅವರ 'ಯಶೋಧರಾ' ನಾಟಕ ಸಾಕು. ಹೆಂಗಸರಲ್ಲಿ ಹೆಂಗಸಾದ ಯಶೋಧರಾ, ಸಿದ್ಧಾರ್ಥ ಮನೆಬಿಟ್ಟು ಹೋದಾಗಿನಿಂದ ಅನುಭವಿಸಿದ ದುಃಖವನ್ನು ಅವಳ ಒಂದೊಂದು ಮಾತಿನಲ್ಲೂ ತೋರಿದ್ದಾರೆ ಮಾಸ್ತಿ ಯವರು. ಬುದ್ಧ ಊರಿಗೆ ಬಂದಾಗ ಅವಳ ಮನಸ್ಸಿನಲ್ಲಿ ನಡೆಯುವ ಆಂದೋಲನ ಈ ನಾಟಕದಲ್ಲಿ ಅಮೋಘವಾಗಿ ಚಿತ್ರಿತವಾಗಿದೆ. ಮಾಸ್ತಿಯವರು ಯಶೋಧರಳ ಮನಸ್ಸಿನ ಆಳದಲ್ಲಿ ನಿಂತು ನುಡಿದಿದ್ದಾರೆ-ಅವಳ ದುಃಖವನ್ನು, ಕೋಪವನ್ನು ನೋವನ್ನು ತಮ್ಮದಾಗಿ ಮಾಡಿಕೊಂಡು. ಟಾಗೂರರ 'ನಟಿರ್‌ಪೂಜಾ' ನಾಟಕದಲ್ಲಿ ಬರುವ ಲೋಕೇಶ್ವರಿಗೂ ಉತ್ತಮವಾದ ಸೃಷ್ಟಿ ಯಶೋಧರಾ. ಊಹೆಗೂ ನಿಲುಕದಷ್ಟು ತೆಳುವಾದ ಭಾವಗಳಿಗೆ ಆಕಾರ ಕೊಡುವುದರಲ್ಲಿ ಗಾಳಿಗೆ ಮೈಯಿಡು. ವುದರಲ್ಲಿ, ನಾಜೂಕಾದ ಪ್ರಸಂಗಗಳನ್ನು ನಿರ್ವಹಿಸುವುದರಲ್ಲಿ ಮಾಸ್ತಿಯವರ ಕೌಶಲ' ಅದ್ಭುತವಾದದ್ದು ಎಂದು ತೋರಿಸಿಕೊಡುವುದಕ್ಕೆ ಇದೊಂದು ನಾಟಕ ಸಾಕು.

**ವಸ್ತು ಪ್ರಕಾರ**

'ಮಾಸ್ತಿಯವರೆ, ನೀವು ಸಾಹಿತ್ಯದ ಅಷ್ಟು ಪ್ರಕಾರಗಳಲ್ಲಿ ಕೆಲಸ ಮಾಡಿದ್ದೀರಿ ನಿಮಗೆ ಸುಲಭವಾಗಿ ಕಂಡು ಬಂದಿರುವುದು ಯಾವುದು? ಕತೆಯೋ? ಕವನವೇ?

'ವಸ್ತು ಹೊಳೆದ ಹಾಗೆ ಪ್ರಕಾರವೂ ತಾನಾಗಿಯೇ ಸಿದ್ಧವಾಗಿರುತ್ತದೆ. ಒಂದು ಇನ್ನೊಂದಕ್ಕೆ ಕೂಡಿಕೊಂಡೇ ಇರುವುದರಿಂದ ಅವುಗಳನ್ನು ಬೇರೆಯಾಗಿ ಹೇಳುವುದು ಸರಿಯಲ್ಲ, ನನಗಂತೂ ಎಲ್ಲವೂ ಸುಲಭವೆನಿಸಿವೆ'

'ಒಂದೇ ವಸ್ತುವನ್ನು ಕವಿತೆಯಾಗಿ, ಬೇಕಾದರೆ ಕತೆಯಾಗಿ ಹೇಳುವುದು ಸಾಧ್ಯವೆಂದು ಕವಿಯೊಬ್ಬರು ಹೇಳಿದರು, ನಿಮ್ಮ ಅನುಭವ ಹೇಗೆ?'

ಸಾಧ್ಯವಲ್ಲ ಎಂಬುದು ನನ್ನ ತಿಳಿವಳಿಕೆ. ಒಂದೊಂದಕ್ಕೂ ಒಂದೊಂದು ಧರ್ಮವಿದೆ. ಕತೆಯಲ್ಲಿ ಒಂದು ತರಹದ ಚಿತ್ತಸ್ವಾಸ್ಥ್ಯ ಇರುತ್ತದೆ. ಕವಿತೆಗೆ ಬೇಕಾದ್ದು ತೀವ್ರತೆ, ಕವಿತೆಗೆ ಸಹಜವಾಗಿ ತೋರಬಹುದಾದ ಭಾವಾತಿರೇಕ ಕತೆಯಲ್ಲಿ ತುಂಬ ಅಸಹಜವೆನಿಸೀತು. ಸಂಗ್ರಹವಾಗಿ ಹೇಳುವುದನ್ನು ಮನಸ್ಸೊಪ್ಪುವ ಹಾಗೆ ಮಾಡುತ್ತದೆ ಕವಿತೆಯೆಂಬ ಪ್ರಕಾರ.

'ನಿಮ್ಮ ಕತೆಗಳಲ್ಲಿನ ಯಶಸ್ಸು ಕವಿತೆಗಳಿಗೆ ಬಂದಿಲ್ಲ....'

'ಯಶಸ್ಸು ಎಂದರೇನು?'

'ಜನ ಮೆಚ್ಚಿಕೊಂಡಿರುವುದು ನಿಮ್ಮ ಕತೆಗಳನ್ನು. ಕವಿತೆಯನ್ನು ಅಷ್ಟರ ಮಟ್ಟಿಗೆ ಮೆಚ್ಚಿಕೊಂಡಿಲ್ಲ, ಏನು ಕಾರಣವಿರಬಹುದು.?'

'ಕತೆಗಳನ್ನು ಅರ್ಥಮಾಡಿಕೊಂಡಿದ್ದೇವೆಂದುಕೊಳ್ಳುವುದು ಜನಕ್ಕೆ ಸುಲಭ. ಕತೆಗಳಲ್ಲೂ ಕಾವ್ಯಾಂಶವಿರುತ್ತವೆ. ಕತೆಗಳನ್ನು ಮೆಚ್ಚಿಕೊಂಡ ಜನಕ್ಕೆ ಆ ಅಂಶ ಅರಿವಾಗಿದೆ ಎಂದು ಹೇಳುವುದು ಧಾರ್ಷ್ಟ್ಯವಾದೀತು. ಕವಿತೆಯಲ್ಲಿ ಹೇಳದ ಭಾಗವನ್ನು ಗ್ರಹಿಸುವುದು ಕಷ್ಟದ ಕೆಲಸ. ವಾಚ್ಯವಾದದ್ದು ಅರ್ಥವಾದಾಗ ಎಲ್ಲವೂ ತಿಳಿಯಿತು ಎಂದುಕೊಳ್ಳುವವರೇ ಹೆಚ್ಚು. ಸೂಚ್ಯವಾದದ್ದಿದೆ ಎಂದು ಕಂಡುಕೊಳ್ಳುವವರು ಎಷ್ಟು ಜನ?'

'ನಿಮ್ಮ ಕಥನ ಕವನಗಳ ಬಗೆಗೂ ಈ ಮಾತು ಅನ್ವಯಿಸುವುದೇ?'

'ಕಥನ ಕವನಗಳಿಗೂ ಈ ಮಾತು ಸತ್ಯ. ಅಲ್ಲಿ ಬರುವ ಪಾತ್ರಗಳ ವ್ಯಕ್ತಿತ್ವದ ಬಗೆಗೆ ತೋರು ಬೆರಳಾಗಿ ಒಂದು ಘಟನೆ ಇರುತ್ತದೆ ಅದು ಅರ್ಥವಾದ ಮಾತ್ರಕ್ಕೆ ಇಡಿ ವ್ಯಕ್ತಿತ್ವ ಪರಿಚಯವಾದ ಹಾಗೇ ?'

'ನಿಮ್ಮ ಕಾವ್ಯದಲ್ಲಿ ಯಾವೊಂದು ದರ್ಶನವೂ ಇಲ್ಲ. ಆಧ್ಯಾತ್ಮವಿದ್ದರೂ ಕಾವ್ಯವೆಲ್ಲ ಅದೇ ಅಲ್ಲ. ನಿಮ್ಮ ಕಥನ-ಕವನಗಳಲ್ಲಿನ ಪಾತ್ರಗಳು ನುಡಿಕೊಡುವ ತತ್ವ ವಿಚಾರಗಳು ಸಹಜವಾಗಿ ಕಾಣುತ್ತವೆ.....'

'ಕಾವ್ಯಕ್ಕೂ, ದರ್ಶನಕ್ಕೂ ವೈರವಿಲ್ಲ. ಕವಿಯ ಬಾಳಿನಲ್ಲಿ ಆ ದರ್ಶನ ಹಾಸು ಹೊಕ್ಕಾಗಿ ಬೆರೆತಿದ್ದಾಗ ಅವನ ಕಾವ್ಯಕ್ಕೆ ಅದರಿಂದ ಕುಂದಿಲ್ಲ. ಬುದ್ಧಿಗತವಾದದ್ದು ಹೃದಯಗತವಾಗದೇ ಉಳಿದಾಗ ಕಾವ್ಯ ಕೆಡುತ್ತದೆ.'

'ಕವಿತೆಯಲ್ಲಿ ಛಂದಸ್ಸು ಮಾಡುವ ಕೆಲಸವೇನು?'

'ಕವಿತೆಯ ಲಯ ಓದುಗನ ಮನಸ್ಸನ್ನು ಹದಗೊಳಿಸುತ್ತದೆ. ಕಾವ್ಯವಿಚಾರಕ್ಕೆ ಸಿದ್ಧಗೊಳಿಸುತ್ತದೆ. ಕಾವ್ಯಕ್ಕೆ ಈ ಲಯ ಅಗತ್ಯ, ಈ ಲಯ ಆಡುಮಾತಿನ ಲಯದ ಹತ್ತಿರವಾದಷ್ಟೂ ಓದುಗ ಅದನ್ನು ಸುಲಭವಾಗಿ ಒಪ್ಪಿಕೊಳ್ಳುತ್ತಾನೆ.

ಮನುಷ್ಯನ ಮಾತಿಗೆ ಸಹಜ ಈ ಲಯ. ಹೊಲಗಳಲ್ಲಿ ಕೆಲಸ ಮಾಡುವ ಹಳ್ಳಿಯ ಹೆಂಗಸರು ತಮ್ಮ ಮಾತುಗಳನ್ನು ಆಡುವುದಿಲ್ಲ. ಹಾಡುತ್ತಾರೆ.

Man may talk without rhyme or reason; but not without rhythm.

ಕನ್ನಡದ ಮೇಲೆ ಇಂಗ್ಲೀಷಿಗಿರುವ ಪ್ರಭಾವದ ಕಡೆಗೆ ಮಾತು ತಿರುಗಿತು.

'ನಮ್ಮ ಜನ ತಮ್ಮೆಲ್ಲ ಸ್ಫೂರ್ತಿಗೂ ಪಾಶ್ಚಾತ್ಯ ಸಂಸ್ಕೃತಿಯ ಕಡೆಗೆ ತಿರುಗುವುದು ತಪ್ಪು. ಕಾವ್ಯಕ್ಕೆ ಹೇಗೆ ಇಂಥ ಅವಲಂಬನೆಯೋ ಹಾಗೆ ವಿಮರ್ಶೆಗೂ ಕೂಡ. ಇಲ್ಲಿಯ ಒಂದು ಒಳ್ಳೆಯ ಕತೆಯೋದಿ ಚೆನ್ನಾಗಿದೆ ಎಂದರೆ ಸಾಲದು. ಅವರಿಗೆ. ಇದು ಮೋಪಾಸಾ ಕತೆಯ ಹಾಗಿದೆ ಎಂದರೆ ತೃಪ್ತಿ. ಇದು ಶುದ್ಧ ತಪ್ಪು'

'ಅಂತಹ ತಪ್ಪೇನು ಇದರಲ್ಲಿ? ವಿದ್ಯಾವಂತರು ಓದಿರುವುದು ಹೆಚ್ಚಾಗಿ ಅಲ್ಲಿಯ ಸಾಹಿತ್ಯವನ್ನು....' ನಾನಂದೆ.

'ನಮ್ಮ ಸಾಹಿತ್ಯ ಸೃಷ್ಟಿಗೂ, ಇಂಗ್ಲಿಷ್ ಸ್ಫೂರ್ತಿ ಕೊಟ್ಟಿತು, ಆದರೆ ವಸ್ತು ನಮ್ಮದು. ಈಗ ಬರೆಯುತ್ತಿರುವವರು? ನಿಮ್ಮ ಕಾವ್ಯ ಕಷ್ಟವೆನಿಸುವುದಕ್ಕೂ ಈ ವಸ್ತು ವಿಜಾತೀಯತೆಯೇ ಕಾರಣ. ನೀವು ಕಾವ್ಯದ ಜೊತೆಗೆ ಟಿಪ್ಪಣಿ ಕೊಡುವುದಾದರೆ ನಾನು ಕಲಿಯಲು ಸಿದ್ಧ.'

'ನಾವೂ ವಸ್ತುವಿಗೆ ಅವರ ಮರೆ ಹೊಕ್ಕಿಲ್ಲ. ನಮ್ಮಲ್ಲಿ ಯಾರೂ ಲಂಡನ್ನಿನ 'ಹೈಡ್ ಪಾರ್ಕ್'ನ ಮೇಲೆ ಕಾವ್ಯ ಬರೆದಿಲ್ಲ!'

'ಮಾತಿನ ರೀತಿ ಅವರದ್ದೇ....' ಅಲ್ಲಿಗೆ ನಿಂತಿತು ಮಾತು.

ಈ ಮೂವತ್ತು ವರ್ಷಗಳಲ್ಲಿ ಕನ್ನಡ ಸಾಹಿತ್ಯದಲ್ಲಿ ನಡೆದಿರುವ ಕೆಲಸ ಮಾಸ್ತಿಯವರಿಗೆ ತೃಪ್ತಿಕೊಟ್ಟಿದೆ. ಮೊತ್ತದ ದೃಷ್ಟಿಯಿಂದ ಗುಣದ ದೃಷ್ಟಿಯಿಂದ ನಡೆದಿರುವ ಕೆಲಸ ತೃಪ್ತಿಕರವಾಗಿದೆ. ಒಂದೇ ಒಂದು ಕೊರತೆ: ಉಕ್ತಿ ಕ್ರಮದಲ್ಲಿ ಸಾಕಷ್ಟು ಪ್ರಯೋಗಗಳು ನಡೆದಿಲ್ಲ.

ಮಾಸ್ತಿಯವರ ಈಚಿನ ಕಾದಂಬರಿಯನ್ನು ಕಳೆದ ವರ್ಷದ ಅತ್ಯುತ್ತಮ ಪುಸ್ತಕವೆಂದು ವಿಮರ್ಶಕರೊಬ್ಬರು ಪರಿಗಣಿಸಿ ಆಕಾಶವಾಣಿಯಲ್ಲಿ ಭಾಷಣ ಮಾಡಿದ್ದನ್ನು ನಾನು ಹೇಳಿದಾಗ ಅವರಿಗೆ ಸಂತೋಷವಾಗಿರಬೇಕು.

ಮಾಸ್ತಿಯವರಿಂದ ಇನ್ನೂ ಹಲವಾರು ಕಾದಂಬರಿಗಳು, ಕಥೆಗಳು ಕವನಗಳು ಬರುತ್ತವೆಂಬ ನೆಚ್ಚಿಕೆಯೊಡನೆ ನಾನೆದ್ದು ಬಂದೆ. ಆತ್ಮಕತೆ ಕೂಡ; ಸದ್ಯದಲ್ಲೇ ಬರೆಯುವುದಾಗಿ ಅವರು ತಿಳಿಸಿದರು.



# ನುಡಿ, ನಾಡು, ಜನ: ಮಾಸ್ತಿ ಮನ

**ಕೆ. ವಿ. ನಾರಾಯಣ**

ಈ ಶತಮಾನದಲ್ಲಿ ಕನ್ನಡ ಜನತೆ ಕಂಡಿರುವ ಮಹಾ ಧೀಮಂತರಲ್ಲಿ ಶ್ರೀ ಮಾಸ್ತಿ ವೆಂಕಟೇಶ ಅಯ್ಯಂಗಾರ್ ಅವರು ಪ್ರಮುಖರು. ಹತ್ತೊಂಬತ್ತನೇ ಶತಕದ ಕೊನೆಯ ದಶಕ (1891)ದಲ್ಲಿ ಹುಟ್ಟಿದ ಅವರು ತಮ್ಮ ಈ ನಿಡುಗಾಲದ ಬಾಳ್ವೆಯ ಉದ್ದಕ್ಕೂ ನಮ್ಮ ಸಂಸ್ಕೃತಿಯ ಹಿರಿಮೆಯನ್ನು ಹೆಚ್ಚಿಸುವ ಹೊಣೆಯನ್ನು ಹೊತ್ತಿದ್ದಾರೆ. ಶ್ರೀನಿವಾಸ ಎಂಬ ಹೆಸರಿನಲ್ಲಿ ಅವರು ರಚಿಸಿದ ಸೃಜನಾತ್ಮಕ ಬರಹಗಳನ್ನು ಓದಿ ಪ್ರಬುದ್ಧ ಜೀವನ ಕ್ರಮವೊಂದಕ್ಕೆ ಪ್ರವೇಶ ಪಡೆಯುವ ಎಲ್ಲ ಕನ್ನಡಿಗರೂ ಅಲ್ಲಿ ಕಂಡುಬರುವ ಅಪೂರ್ವ ಜೀವನೋತ್ಸಾಹ, ಶ್ರದ್ಧೆಗಳನ್ನು ಕಂಡಿದ್ದಾರೆ. ಕಥೆಗಳು, ಕವನಗಳು, ನಾಟಕಗಳು, ವಿಮರ್ಶೆ, ವಿಚಾರ ಹೀಗೆ ಹಲವು ಮುಖಗಳಲ್ಲಿ ನಡೆದಿರುವ ಅವರ ಸಾಹಿತ್ಯ ರಚನೆ ಇನ್ನೂ ಕುಡಿಯೊಡೆಯುತ್ತಲೇ ಇದೆ. ಜಗತ್ತಿನ ಶ್ರೇಷ್ಠ ಚಿಂತಕರ ವಿಚಾರಗಳನ್ನು ಅವರು ಕನ್ನಡದಲ್ಲಿ ನಮಗೆ ನೀಡಿದ್ದಾರೆ. ತಮ್ಮ ಜೀವನ ವೃತ್ತಾಂತವನ್ನು ಅವರು 'ಭಾವ' ಎಂಬ ಗ್ರಂಥದಲ್ಲಿ ಹೇಳಿದ್ದಾರೆ. ಹೊರಗೆ ಕಾಣುವ ಬರೆಹಗಾರ ಚೇತನದ ಒಳ ವಿವರಗಳು ಅಲ್ಲಿ ಪ್ರಕಟಗೊಂಡಿವೆ. ಇದಲ್ಲದೆ ಹಲವು ಹತ್ತು ವೇಳೆಗಳ ಸಂದರ್ಶನಗಳಲ್ಲೂ ಅವರ ವಿಚಾರಗಳು ತಿಳಿದುಬಂದಿವೆ.

ಮಾಸ್ತಿಯವರೊಡನೆ ಮಾತನಾಡಲು ಅವರ ಮನೆಗೆ ಬೆಳಗಿನ ವೇಳೆಯಲ್ಲಿ ಹೋದೆವು. ನಾವು ಹೋಗುತ್ತಿದ್ದಂತೆಯೇ ಉದ್ದ ಕೋಟು ತೊಟ್ಟು ಬಂದರು. ಬಾಗದ ದಿಟ್ಟ ದೇಹ. ತೆಳುನಿಲುವು. ಹತ್ತಿರ ಕುಳಿತರು. ಮಾತಿಗೆ ತೊಡಗಿದರು. ನನ್ನ ಜತೆ ಬಂದ ವಿಜಯಾ ಅವರು ಅವರಿಗೆ ಪರಿಚಯ ಇದ್ದರು. ಅವರ ಆರೋಗ್ಯ ಕುರಿತಂತೆ ಕೆಲವು ಮಾತುಗಳನ್ನು ಕೇಳಿದರು. ಆಮೇಲೆ ನನ್ನ ಕೆಲಸ, ಊರುಗಳ ಬಗೆಗೆ ಕೇಳಿದರು. ಮೈಸೂರು ಜಿಲ್ಲೆಯ ಪಿರಿಯಾಪಟ್ಟಣ ತಾಲ್ಲೂಕಿನ ಒಂದು ಹಳ್ಳಿ ಕಂಪಲಾಪುರವೆಂದು ಕೇಳಿದಾಗ ತಾವು 1928ರಲ್ಲಿ ಮೈಸೂರು ಸಬ್‌ಡಿವಿಷನ್ ಆಫೀಸರ್ ಆಗಿದ್ದಾಗ ಕಂಡ ನನ್ನ ಹಳ್ಳಿಯ ಒಂದು ನೆನಪನ್ನು ತೆಗೆದರು. ಅಲ್ಲಿನ ಒಬ್ಬ ಲಾವಣಿಕಾರ ಹಾಡಿದ ಒಂದು ಲಾವಣಿಯ ಸೊಗಸು ತಮ್ಮ ಮೇಲೆ ಪ್ರಭಾವ ಬೀರಿದ್ದನ್ನು ಹೇಳಿದರು. ದೊಡ್ಡವೀರರಾಜನ ಪ್ರಭಾವವನ್ನು ಹೊಗಳುವ ಲಾವಣಿಯದು. ಒಂದು ಸಾಲಿನಲ್ಲಿ, ದೊಡ್ಡವೀರನ ಹೆಸರು ಕೇಳಿದರೆ ಪರಂಗಿಯವರು ತಲೆಯ ಮೇಲಿನ ಟೋಪಿಯನ್ನು ತೆಗೆಯುತ್ತಿದ್ದರೆಂದು ಆ ಲಾವಣಿ ಹೇಳಿತಂತೆ. ಇವರ ನೆನಪಿನಲ್ಲಿ ಐದು ದಶಕಗಳ ನಂತರವೂ ಹಸುರಾಗಿ ಉಳಿದ ನನ್ನ ಹಳ್ಳಿಯ

ಆ ಲಾವಣಿಕಾರನ ಮತ್ತು ಅವನ ಲಾವಣಿಯನ್ನು ಕುರಿತಂತೆ ಯೋಚಿಸುತ್ತಿರುವಂತೆಯೆ ಇವರ ಬರೆಹಗಳ ಹಿಂದಿರುವ ಎಣೆಯಿಲ್ಲದ ಜೀವನ ಸಮ್ಮುಖತೆಯ ಬೇರುಗಳು ಕಾಣತೊಡಗಿದವು. ಕವಿ ಕೆ. ಎಸ್. ನ . ಅವರ ಕವನದ ಸಾಲೊಂದು ನೆನಪಿಗೆ ಬಂತು. 'ಮರೆತ ಹಾಡು ಇವರ ಹೃದಯದೊಳಗೆ ಸೇರಿಹೋದ ಸುದ್ದಿ ನನ್ನ ಕಿವಿಗೆ ಬಿದ್ದು ಬೆಳಕು ಹರಿಯಿತು.'

ಸರಿ. ನಾನು ಕೆಲವು ಪ್ರಶ್ನೆಗಳೊಡನೆ ಸಿದ್ಧನಾಗಿ ಹೋಗಿದ್ದೆ. ಹೇಗೆ ಉತ್ತರ ಕೊಡುತ್ತಾರೋ ಎಂಬ ಕುತೂಹಲ, ಜತೆಗೆ ಕೊಂಚ ಭಯ ಎರಡೂ ಇದ್ದವು. ಮೊದಲುಮಾಡಿದೆ. ಜೀವನದಲ್ಲಿ ನಿಡುಗಾಲವನ್ನು ಕಳೆದು ಮಾಗಿದ ವಯದಲ್ಲಿ ನಿಂತ ಇವರಿಗೆ ಯಾರೋ ಪರಿಚಯವಿಲ್ಲದ ಮನುಷ್ಯನೊಬ್ಬ ಪ್ರಶ್ನೆಗಳನ್ನು ಹಾಕಿ ಉತ್ತರವನ್ನು ಬಯಸುವುದು ಕೊಂಚ ವಿಚಿತ್ರ ಅನ್ನಿಸಿರಬಹುದೆ ? ಅದೇ ಮಾತನ್ನು ಅವರಲ್ಲಿ ಕೇಳಿದೆ. ಬಹುಜನರಿಗೆ ಗೊತ್ತಿರುವ ಅವರ ನಗೆಯೊಡನೆ ಹೇಳಿದರು : 'ನನಗೆ ಯಾರೂ ಅಪರಿಚಿತರು ಎನಿಸುವುದಿಲ್ಲ, ನನ್ನ ಕಿರಿಯರು ನಾನು ಕಂಡವರೇ ; ನಾನು ಅವರನ್ನು ಕಂಡೇ ಇರತೇನೆ. ಏನು ಬೇಕೋ ಕೇಳಿ.

ಇವರು ಈ ಶತಮಾನದ ನಮ್ಮ ಸಾಹಿತ್ಯದ ಬೆಳವಣಿಗೆಯಲ್ಲಿ ತಾವು ಭಾಗಿಗಳಾಗಿದ್ದಲ್ಲದೆ, ಅದರ ವಿವಿಧ ಚಳವಳಿಗಳನ್ನು ಕಂಡವರು. ಬೇರೆ ಬೇರೆ ಹಂತಗಳಲ್ಲಿ ನಡೆದ ಈ ಸಾಹಿತ್ಯ ಚಳವಳಿಗಳು ಏನು ಪರಿಣಾಮಗಳನ್ನು ತಂದಿವೆ ? ಅದರಲ್ಲೂ ಈ ಹೊತ್ತು ನಿಂತು ನೋಡಿದರೆ ಮಾಸ್ತಿಯವರಿಗೆ ಇವು ಹೇಗೆ ಕಾಣುತ್ತವೆ ? ಎಂದು ತಿಳಿಯುವ ಬಗೆಯಲ್ಲಿ ಒಂದು ಮಾತು ಕೇಳಿದೆ.

'ನಾನು ಬರೆಯೋಕೆ ಪ್ರಾರಂಭಮಾಡಿದ ಕಾಲದಲ್ಲಿ ಈ ದೇಶದಲ್ಲಿ ಬರೆವಣಿಗೆ ಮನುಷ್ಯರು ಎಲ್ಲ ಸೇರಿ ಬಹು ಅಲ್ಪ ಸಂಖ್ಯೆಯ ಜನ ಇದ್ದಿರಬಹುದು. ಧಾರವಾಡದ ಕಡೆ ಕೆಲವರು, ಮಂಗಳೂರು ಕಡೆ, ಮೈಸೂರು ಕಡೆ ಒಂದು ಹತ್ತು ಜನ ಮಿಕ್ಕ ಹಾಗೆ ಒಂದಿಷ್ಟು ಜನ ಇದ್ದವು. ಬರೆಯುವವರ ಸಂಖ್ಯೆ ಹೀಗಿರುತ್ತಾ ಓದುವವರ ಸಂಖ್ಯೆ ಐನೂರೋ ಆರುನೂರೋ ; ಈಗ ಬರೆಯುವವರು ನೂರಾರು ಜನ ಆಗಿದ್ದಾರೆ. ಹಾಗೆ ಓದುವವರು ಹತ್ತು ಸಾವಿರ.' ನಾನು ಕೇಳಿದೆ, ' ಈ ಚಳವಳಿಗಳ ಪರಿಣಾಮ ಏನಾದರೂ...' ನನ್ನನ್ನು ತಡೆದು ಹೇಳಿದರು, 'ನನ್ನ ಕೇಳಿದರೆ ಈ ಚಳವಳಿ ಅನ್ನೋ ಶಬ್ದವೇ ತಪ್ಪು. ಬರೆಯೋರು ಬರೀತಾನೇ ಇರುತ್ತಾರೆ ಬೇರೆಯವರು ಅದು ಬೇಕು ಇದು ಬೇಕು ಅಂತ ಅನ್ನತಾನೇ ಇರತಾರೆ. ಚಳವಳಿ ಅಂತ ಏನಿರುತ್ತೆ ? ಅದರಿಂದ ಪರಿಣಾಮ ಏನಾಗುತ್ತೆ ? ಇನ್ನು ಜನ ಏನು ಮಾಡತಾರೆ ಅಂತ ? ಇವತ್ತು ತಾನೇ ಏನು ಪರಿಣಾಮ ಬೀರುತ್ತಾರೆ ? ಅದರಿಂದ, ಜನರಿಂದ ಏನೂ ಆಗೋದಿಲ್ಲ. ಯಾರೋ ಬರೆಯುವವನು ಸಾಹಿತ್ಯಕಾರ ಸಾಹಿತ್ಯದ ವಿಷಯದಲ್ಲಿ ಮಾತನಾಡುತ್ತಾನೆ. ನಾನು ಮಾಡುತೇನೆ, ಬಿಡತೇನೆ ಅಂತಾನೆ.

ಇನ್ನೊಬ್ಬರ ಬರೆಹ ಚೆನ್ನಾಗಿಲ್ಲ ಅಂತಾನೆ. ನಾನೇ ಗಟ್ಟಿಗ ಅನ್ನತಾನೆ. ಮಿಕ್ಕ ಜನ ಬೇರೆ ಏನೋ ಅನ್ನತಾರೆ. ಬರೆಯೋನಿಗೆ ಆತ್ಮ ವಿಶ್ವಾಸ ಇರಬೇಕು. ಆತ್ಮ ವಿಶ್ವಾಸ ಇಲ್ಲದಿದ್ದರೆ ಯಾರಿಗೆ, ಕೆಲಸ ಮಾಡೋಕೆ ಆಗುತ್ತೆ? ಬೇರೆಯವರ ವಿಷಯದಲ್ಲಿ ಅಲಕ್ಷ್ಯ ಇರಬಾರದು.

ಅಲ್ಲಿಂದ ಮುಂದಿನ ಪ್ರಶ್ನೆಗೆ : ಅವರ ಸಾಹಿತ್ಯವನ್ನು ಕುರಿತಂತೆ ಕೆಲವು ಮಾತು ಗಳನ್ನು ಕೇಳಲು ಬಯಸಿದ್ದೆ. ಸಾಮಾನ್ಯವಾಗಿ ಅವರ ಬರಹಗಳಲ್ಲಿ ಕಂಡು ಬರುವ ಜೀವನ ದೃಷ್ಟಿ: ಸಮಾಧಾನ, ನೆಮ್ಮದಿ ಇದು ಅವರು ಜೀವನದಲ್ಲಿ ಅಪೇಕ್ಷಿಸುವ ಸ್ಥಿತಿಯೋ ಅಥವಾ ನಮ್ಮ ಬದುಕಿನ ಒಳಗೆ ಅದರ ಬೇರುಗಳು ಇವೆ ಅಂತ ತಿಳಿಯು ತ್ತಾರೋ? ನಾನು ಬಳಸಿದ ಸಮಾಧಾನ ಎಂಬ ಮಾತು ಕುರಿತು ಕೇಳಿದರು. 'ಸಮಾ ಧಾನ ಎಂದರೆ ಏನು ಅರ್ಥ? ಇದ್ದು ಬಿದ್ದದ್ದೆಲ್ಲಾ ಸರಿಯಾಗಿದೆ ಅಂತಲೇ?' 'ಅಲ್ಲ. ಸರಿಯಾಗಿಲ್ಲ ಅಂತ ನಾನು ಹೇಳಿದೇನಲ್ಲಾ' ವಿವರಣೆ ಕೊಡುತ್ತಾ ನಾನು ಹೇಳಿದೆ 'ನಿಮ್ಮ ಪಾತ್ರಗಳು ಜೀವನದ ಮೂಲಭೂತ ಬದಲಾವಣೆಗೆ ಯತ್ನ ಮಾಡದೆ ಪರಿ ಸ್ಥಿತಿಯನ್ನು ಪರಿವರ್ತನೆ ಮಾಡಿಕೊಂಡು ಹೋಗುತ್ತವೆಯಲ್ಲವೇ?'

'ನನ್ನ ಬರೆಹದ ಎಲ್ಲ ಕಡೆಯೂ ಹಾಗೆ ಇದೆ ಅಂತ ಹೇಳೋಕೆ ಬರೋಲ್ಲ. ಜೀವನವನ್ನು ಚಿತ್ರಿಸೋದರಲ್ಲಿ ನನ್ನದೂ ಒಂದು ದಾರಿ ಇದೆ. ಆ ದಾರಿ ಸಹಜ ವಾಗಿಯೇ ಒಂದು ರೀತಿಯಲ್ಲಿ ಕಾಣುತ್ತದೆ. ಇನ್ನು ಸಮಾಧಾನದ ಮಾತು. ಕಷ್ಟ ಪಡೋವವರು ಪಡತಾನೆ ಇರತಾರೆ. ನನ್ನ ಬರಹಗಳಲ್ಲಿ ಕೂಡ ಇದು ಕಾಣುತ್ತೆ' ನಾನು ಕತೆಗಳ ಬಗೆಗೆ ಹೇಳಿದ ಒಟ್ಟಂದದ ಮಾತುಗಳ ಬಗೆಗೆ ಹೇಳಿದರು: 'ಯಾರೋ ನಾಲ್ಕು ಜನ ಬುದ್ಧಿವಂತರು ಹೇಳಿದ ಮಾತು ಇದು; ಗಿಳಿಪಾಠ ಆಗಿಹೋಗಿದೆ' ಎಲ್ಲ ಸಮಾಧಾನ ಇದೆಯೆ? ಎಲ್ಲ ಒಳ್ಳೆಯವರೇ ಇದ್ದಾರೆಯೇ? ಕೆಟ್ಟವರೂ ಇದ್ದಾರೆ. ಕೆಲವರು ಮಾಸ್ತಿಯವರ ಕಥೆಗಳಲ್ಲಿ ಕೆಟ್ಟ ಜನವೇ ಇಲ್ಲ ಅಂತ ಹೇಳಿದಾರೆ. ಓದುವವನಿಗೆ ಹಾಗೆ ಅನ್ನಿಸಿದರೆ ನಾನೇನು ಮಾಡಲಿ? ಅನಿಸಿದರೂ ಅನಿಸಿತೇ; ಅದ ರಲ್ಲಿ ತಪ್ಪೇನೂ ಇಲ್ಲ....' ಇಲ್ಲಿ ನಾನು ಅನಂತಮೂರ್ತಿಯವರು ಈಚೆಗೆ ಮಾಸ್ತಿಯು ವರ ಕಥೆಗಳ ಬಗೆಗೆ ಬರೆದ ಮಾತುಗಳನ್ನು ಹೇಳುತ್ತಾ ಆ ಬಗೆಗೆ ಮಾಸ್ತಿಯವರ ಅಭಿಪ್ರಾಯ ಕೇಳಬಯಸಿದೆ: 'ನೀವು ಮನುಷ್ಯನ ಪ್ರವೃತ್ತಿ ಮತ್ತು ಅವನ ಹೊರ ಗಿನ ಸಂಸ್ಕೃತಿ ಇವುಗಳ ಮುಖಾಮುಖಿಯಲ್ಲಿ ಸಂಸ್ಕೃತಿಯ ಪರವಾಗಿ ನಿಲ್ಲುವ ಪಾತ್ರಗಳನ್ನು ಸೃಷ್ಟಿಸುತ್ತೀರಿ ಅಂತಾ ಹೇಳಿದ್ದಾರೆ...' 'ಜೀವನದಲ್ಲಿ ಹೇಗಿದೆಯೋ ಹಾಗೆ ಬರೆದಿದೇನೆ. ಅದು ನನ್ನ ತಿಳಿವಳಿಕೆ. ಅದು ಸಹಜವಾಗಿ ಇದ್ದರೆ ಚಿತ್ರ ಸರಿ ಯಾದ ಚಿತ್ರ. ಅದರ ಯಾವುದೋ ಒಂದು ಭಾಗ ಮುಖ್ಯವಾಗಿ ಕಾಣಬಹುದು ಇನ್ನೊಂದು ಭಾಗ ಅಷ್ಟೊಂದು ಮುಖ್ಯವಾಗಿ ಕಾಣದೇ ಇರಬಹುದು. ನನ್ನ ಮುಖ್ಯ ಉದ್ದೇಶ ಜೀವನದ ಚಿತ್ರ ಕೊಡೋದು. ಕಂಡ ಜೀವನ ಹೇಳಿದೇನೆ. ಇದು ಒಳ್ಳೆ

ಯದು, ಇದು ಕೆಟ್ಟದು, ಅಂತ ಹೇಳೋದಿಲ್ಲ. ಹಾಗೆ ಹೀಗೆ ಆಗಬೇಕಿತ್ತು ಅಂತಾನೂ ಹೇಳೋದಿಲ್ಲ. ಹೀಗಿದೆ ಅಪ್ಪ ಅನ್ನತೇನೆ. ನೀವು ಏನು ಮಾಡುತೀರೋ ಅದನ್ನ ಮಾಡಿ. ಹಾಗೆ ಹೇಳೋದು ನನ್ನ ಕೆಲಸ ಅಲ್ಲ ಅನ್ನತೇನೆ. ನನ್ನ ಕೆಲಸ ಯಾವುದು ಅಂದರೆ ನನ್ನ ಹಿರಿಯರು ಮಾಡಿದ ಬಗೆಯದು. ವಾಲ್ಮೀಕಿ, ಕಾಳಿದಾಸ, ಷೇಕ್ಸ್ ಪಿಯರ್, ಗಯಟೆ ಇವರೆಲ್ಲ ನನ್ನ ಹಿರಿಯರು. ನನ್ನದು ಅವರ ದೃಷ್ಟಿ. ಏನಂತಾರೆ ಅವರು? "ಜೀವನ ದೊಡ್ಡದು, ಕಷ್ಟ ಇದೆ; ನೋವು ಇದೆ" ನಾನು ಇದರಲ್ಲೇ ಅವರ ಜತೆಗೇ ಇದ್ದೇನೆ.

'ಈ ಜೀವನ ನಿರೀಕ್ಷೆಯ ಕ್ರಮವೇ ನಿಮ್ಮ ಕಥೆಗಳ ತಂತ್ರವನ್ನು ನಿರ್ದೇಶಿಸಿರ ಬಹುದೆ? ಎಂದು ಕೇಳಿದೆ. ಅವರೆಂದರು: 'ತಂತ್ರವೇ ಇಲ್ಲ' 'ಹಾಗಲ್ಲ, ಉದಾಹರ ಣೆಗೆ ನಿಮ್ಮ ಬಹುಪಾಲು ಬರಹಗಳಲ್ಲಿ ಯಾರೋ ನಿಮಗೆ ಹೇಳಿದ್ದನ್ನು ನೀವು ನಮಗೆ ಹೇಳುವ ಬಗೆಯನ್ನು ಅನುಸರಿಸುತ್ತೀರಿ. ಇದು ನಿಮ್ಮ ಮೊದಲ ಬರಹಗ ಳಲ್ಲಿ ಕಂಡಷ್ಟೆ ಇಂದಿನ ಬರಹಗಳಲ್ಲೂ ಕಾಣುತ್ತದೆ.

'ಇರಬಹುದು. ಯಾರೋ ನನಗೆ ಹೇಳಿದ್ದು. ಅವರು ಹೇಳಿದಂತೆ ನಿಮಗೆ ಹೇಳತೇನೆ. ಎಲ್ಲ ಕಥೇನೂ ಯಾರೋ ಒಬ್ಬರು ಹೇಳುತ್ತಾರೆ, ಮತ್ತು ಜನ ಕೇಳು ತ್ತಾರೆ. ಕೆಲವು ವೇಳೆ ನಾನು ಹೇಳಬಹುದು-ಬಹುವೇಳೆ ಇತರರು ಹೇಳಬಹುದು.

'ಇದು ನಮ್ಮ ಪರಂಪರೆಯ ಸಾಹಿತ್ಯದಲ್ಲೂ ಕಂಡುಬರುವ ಲಕ್ಷಣ ಕೂಡ ಅಲ್ಲವೇ'

'ಏನೋ ನನಗೆ ಗೊತ್ತಿಲ್ಲಪ್ಪಾ. ಜನಜೀವನವನ್ನು ತಿಳಿಸಬೇಕು ಅನ್ನೋ ದಷ್ಟೆ ನನ್ನ ಮುಖ್ಯ ಗಮನ. ಇದನ್ನು ಕುರಿತು 'ಭಾವ'ದಲ್ಲಿ ಬರೆದಿದೇನೆ. ತರುಣ. ಹೊರಗಿನ ಕಥೆಗಳನ್ನು ಓದಿದೆ. ಅದರಲ್ಲೂ ಸ್ಟ್ರಾಂಡ್ ಮ್ಯಾಗಜೀನ್‌ನಲ್ಲಿ ಬರುತ್ತಿದ್ದ ಕಥೆಗಳನ್ನು ಓದಿ ನಮ್ಮ ಜನಗಳಿಗೆ ಇಂಥದು ಇದ್ದರೆ ಚೆನ್ನಾಗಿರುತ್ತೆ ಅಂತ ಅನ್ನಿ ಸಿತು. 1910-11ರಲ್ಲಿ ಮೊದಲ ಕಥೆ ಬರೆದೆ. ಆಗ ನಾನು ವಿದ್ಯಾರ್ಥಿ. ಬಿ. ಎ. ತರಗತಿಯಲ್ಲಿ ಇದ್ದೆ. ಹಾಗೇ ಬರೀತಾ ಬಂದೆ. ಹತ್ತು ವರ್ಷದಲ್ಲಿ ಹನ್ನೊಂದು ಕಥೆಗಳನ್ನು ಬರೆದೆ. ಅವುಗಳಲ್ಲಿ ಹತ್ತನ್ನು ಸೇರಿಸಿ ಕೆಲ ಸಣ್ಣ ಕಥೆಗಳು ಅಂತ ಅಚ್ಚು ಮಾಡಿದೆ. ಹಾಗೇ ಪದ್ಯ ಬರೆದೆ. ಹಾಡು ಬರೆದೆ. ನಾವೆಲ್ಲು ಬರೆದೆ. ಉದ್ದಕ್ಕೂ ಇದೇ ದೃಷ್ಟಿ. ನಮ್ಮ ಜನಕ್ಕೆ ಒಳ್ಳೇ ಪುಸ್ತಕ ಇರಬೇಕು. ಅನ್ನೋದು. ಬರೆದಿರೋದರ ಬಗೆಗೆ ನಾನು ವಿನಯದಿಂದ ಮಾತನಾಡೋದಿಲ್ಲ. ನನ್ನ ಅಪೇಕ್ಷೆ ಏನು ಅನ್ನೋದು ಮಾತ್ರ ನಾನು ಹೇಳಬಲ್ಲೆ. ನನ್ನ ಬರೆಹ ಅನ್ನೋದು ಆ ಬಗೆಯ ಬರೆಹದಲ್ಲಿ ಅತ್ಯುತ್ತಮ ಆಗಬೇಕು ಎಂತ ನನ್ನ ಬಯಕೆ. ಆಯಿತೆ, ಇಲ್ಲವೆ ಅದನ್ನು ನೀವು ಹೇಳಬೇಕು. ನನ್ನ ಮುಖ್ಯ ಉದ್ದೇಶ ನಮ್ಮ ಜನಕ್ಕೆ ಓದನ್ನು ಒದಗಿಸು ವುದು. ನಾನು ಮನೆಯಲ್ಲಿ ಕಥೆ ಹೇಳುವ ತಾಯಿ. ತಾಯಿ ತನ್ನ ಮಕ್ಕಳಿಗೆ ಒಳ್ಳೆ

ಯದು ತಂದು ಕೊಟ್ಟಂತೆ, ನನ್ನ ಮನೆಯ ಮಕ್ಕಳಿಗೆ ಒಳ್ಳೆಯದು ಸಿಗಬೇಕೆಂತ ನನ್ನ ಅಪೇಕ್ಷೆ. ಸಾಹಿತ್ಯ ಯಾಕೆ ಬರೆಯಬೇಕು? ತನ್ನ ಜನರಿಗೆ ಒಳ್ಳೆಯ ವಿಷಯವು ಸಿಗಬೇಕು ಅಂತ ಅಲ್ಲವೇ? ನನ್ನ ಚಿತ್ರ ಚೆನ್ನಾಗಿರಬೇಕು ಅಂತ ನನ್ನ ಆಶೆ. ಕೆಲವರು ಚೆನ್ನಾಗಿದೆ ಅಂತಾರೆ. ಕೆಲವರು ಚೆನ್ನಾಗಿಲ್ಲ ಅಂತಾರೆ. ಎರಡೂ ಮಾತು ಸರಿಯೆ. ಅದು ಅವರವರ ಮನಸ್ಸು' ಮಾತಿನ ಕೊನೆಗೆ ಅವರು ತಮ್ಮ ಸಹಜವಾದ ಮುಕು ನಗೆಯನ್ನು ತುಂಬಿಕೊಂಡಿದ್ದರು.

'ಹೀಗೆ ಬೇರೆ ಬೇರೆ ನಿಲುವುಗಳನ್ನು ಸಾಹಿತ್ಯದಿಂದ ಅಪೇಕ್ಷಿಸಲು ಅನುಭವ ಬೇರೆ ಬೇರೆಯಾಗಿರುವುದು ಕಾರಣ ಆಗಿರಬಹುದೆ?

'ಇರಬೇಕು. ಅನುಭವ ಬೇರೆ ಇರತ್ತೆ. ನಿರೀಕ್ಷೆ ಬೇರೆ ಇರುತ್ತೆ. ಕೆಲವರಿಗೆ ಸಿಹಿ ಆಸೆ. ಕೆಲವರಿಗೆ ಉಪ್ಪು ಆಸೆ ಅಲ್ಲವೆ?

ಮಾತಿನ ನಡುವೆ ವಾಲ್ಮೀಕಿಯ ವಿಚಾರ ಬಂದಿತು. ಅಲ್ಲದೆ ಮಾಸ್ತಿಯವರು ರಾಮಾಯಣವನ್ನು ತಮ್ಮ ಬರೆಹದ ಬದುಕಿನ ಉದ್ದಕ್ಕೂ ಒಂದಲ್ಲ ಒಂದು ವಿಧ ದಲ್ಲಿ ನಮಗೆ ತಿಳಿಸಿ ಹೇಳುತ್ತಾ ಬರುತ್ತಿದ್ದಾರೆ. ಅವರ ಈಚಿನ ಪುಸ್ತಕವೂ (ಮುದ್ರ ಣದಲ್ಲಿ ಇರುವುದು) ಕೂಡ ಅತೀ ಕ್ರಮದ್ದು. ಹಾಗಾಗಿ ಕೇಳಿದ. 'ಆ ಕೃತಿಯಲ್ಲಿ ನಿಮಗೆ ವೈಯಕ್ತಿಕವಾದದ್ದಕ್ಕಿಂತಲೂ, ನಮ್ಮ ಜೀವನ ಕ್ರಮಕ್ಕೆ ಸೂಚಿಯಾಗಬಲ್ಲ ಯಾವ ಅರ್ಥ ಕಂಡಿದೆ?

ಉಲ್ಲಸಿತರಾದರು. 'ಯಾವ ಅರ್ಥ ಬೇಕು ನಮಗೆ? ವ್ಯಕ್ತಿ ಜೀವನಕ್ಕೆಂದು ಧ್ಯೇಯ ಬೇಕು. ನಮ್ಮ ದೇಶಕ್ಕೊಂದು ಧ್ಯೇಯ, ಮಾದರಿ ರಾಮಚಂದ್ರ. ದೊಡ್ಡ ಮನುಷ್ಯನಾಗಿರಬೇಕು; ಸ್ವಾರ್ಥಕೂಡದು. ಇನ್ನೊಬ್ಬರ ಕಷ್ಟದಲ್ಲಿ ಸಹಾಯವಾಗ ಬೇಕು; ತನ್ನ ಕಷ್ಟ ಸಹಿಸಬೇಕು; ನಮ್ಮ ರಾಷ್ಟ್ರದ ಆದರ್ಶ ಇದು. ಧರ್ಮರಾಯ ರಾಮಚಂದ್ರ ಭರತ ವರ್ಷದ ಆದರ್ಶ ಪುರುಷರು. ದೊಡ್ಡವರಾಗಿ ಬಾಳಬೇಕಾ ದರೆ ಏನು ಮಾಡಬೇಕು? ರಾಮನ ಹಾಗೆ ಇರಬೇಕು. ಅನ್ಯಾಯವಾಗಿ ರಾಜ್ಯವನ್ನು ಅಕ್ರಮಿಸಿಕೊಂಡ ಜ್ಞಾತಿಗೆ 'ಎಲ್ಲ ನೀನೇ ಇಟ್ಟುಕೊಳ್ಳೋ ಅಪ್ಪ. ನನಗೆ ಐದು ಗ್ರಾಮಗಳನ್ನು ಕೊಡು' ಅಂತೋ ಕೇಳೋ ಧರ್ಮರಾಯನ ತಾಳ್ಮೆ ಇರಬೇಕು. ದೇಶ ಸಮಾಧಾನವಾಗಿ ಇರಬೇಕು ಅಂತ ಇಷ್ಟ ಇದ್ದರೆ ನಿಸ್ವಾರ್ಥ ಇರಬೇಕು. ಮತ್ತು ದೊಡ್ಡತನ ಇರಬೇಕು. ಅವನೇನು ಭೀತಿಯಿಂದ ಕೇಳಿದನೆ? ಇಲ್ಲ. 'ನನ್ನ ರಾಜ್ಯ ನನ್ನದು. ನೀನೂ ತಗೊಂಡಿದೀಯಾ, ಬೇಕಾದರೆ ಅರ್ಧ ನೀನು ಇಟ್ಟುಕೋ. ಹೀಗೆ ಹೇಳಿಯೇನು. ಆದರೆ ಅರ್ಧ ಸಾಲದು ಅಂತೀಯಲ್ಲಾ ಐದು ಗ್ರಾಮಗಳನ್ನಾ ದರೂ ಕೊಡು' ಅಂದ. ಎದುರಾಳಿ 'ಕೊಡೋದಿಲ್ಲ' ಅಂದ. ಈ ಕತೆಯ ಉದ್ದೇಶ ಏನು? ನಿಸ್ವಾರ್ಥ ಒಳ್ಳೆಯದು. ಸ್ವಾರ್ಥ ಕೆಟ್ಟದು. ಸ್ವಾರ್ಥ ಅಣ್ಣತಮ್ಮಂದಿರಲ್ಲಿ ಜಗಳ ತಂದಿತು. ಲಂಕೇಲಿ, ಕಿಷ್ಕಿಂದೆಯಲ್ಲಿ, ನಿಸ್ವಾರ್ಥ ದೊಡ್ಡದು. ಎಲ್ಲಿಲ್ಲದ

ಜೀವನ ಸೌಂದರ್ಯ ತಂದಿತು ಅಯೋಧ್ಯೇಲಿ. ನೀ ತಗೋ ಅಂತ ಆವನು, ನೀ ತಗೋ ಅಂತ ಇವನು. ಹ್ಯಾಗೆ ಬದುಕಿದರು ಭರತ-ರಾಮ! ನನ್ನದು ನನ್ನದು ಅಂದರು ಕಿಷ್ಕಿಂಧೇಲಿ ; ಏನಾಯ್ತು ಅಲ್ಲಿ ? ಲಂಕೇಲಿ ಏನಾಯ್ತು ? ಯಾಕೆ ಪ್ರಾಣ ಕಳಕೊಳ್ಳತೀಯೋ ಅಂದ ವಿಭೀಷಣ ಬಿಟ್ಟು ಹೊರಗೆ ಬಂದ. ಲೋಕದಲ್ಲಿ ಒಳ್ಳೆಯದು ಆಗೋದು ನಿಃಸ್ವಾರ್ಥದಿಂದ ; ಕೆಡಕು ಆಗೋದು ಸ್ವಾರ್ಥದಿಂದ. ಲೋಕಾ ನಡೆಸೋ ಒಳ್ಳೇತನ ಹಾಗೇ ಕೆಡಿಸೋದು ಕೂಡಾ ಸಾಧ್ಯ. ತುಂಬಾ ಒಳ್ಳೆಯವನಾಗಿದ್ದ ಭರತ ಕೆಟ್ಟವನಾಗಿದ್ದರೆ ? ರಾಜ್ಯಾನೆಲ್ಲಾ ಇಟ್ಟುಕೊಂಡಿದ್ದರೆ ? ಒಳ್ಳೆಯತನ ಲೋಕಾನ ಕೆಡಿಸಿಬಿಡಬಹುದು. ಹೀಗೆ ಧರ್ಮರಾಯನ ಒಳ್ಳೆಯತನ ಕೆಡಿಸಲಿಲ್ಲವೇ ?'

'ಅದು ಹೇಗೆ ?' ಕೊಂಚ ವಿವರಣೆ ಬಯಸಿ ಕೇಳಿದೆ. ಹೌದು "ಯುಧ್ಯಸ್ವ ವಿಗತ ಜ್ವರಃ" ಅಂತ ಗೀತೆ ಸಾರುತ್ತೆ. ಗೀತೆ ಯಾಕೆ ಬಂತು ಮಹಾಭಾರತದ ಮಧ್ಯ ದಲ್ಲಿ ? ಧರ್ಮರಾಯ ಮಾಡಿದ್ದು ಸರಿಯಲ್ಲ ಅಂತ ಹೇಳೋಕೆ ಸಹ. ದ್ವೇಷ ಬೇಡ ; ಆದರೆ ನ್ಯಾಯಕ್ಕಾಗಿ ಬಡಿದಾಡಬೇಕು ನೀನು. ನ್ಯಾಯ ಉಳಿಯೋ ದಾದರೂ ಹೇಗೆ ಮಹಾ ಒಳ್ಳೆಯವನಾಗಿದೇನೆ ಅಂತ ಎಲ್ಲರಿಗೂ ದಾರಿ ಬಿಟ್ಟು ಬಿಟ್ಟರೆ ? ದುಷ್ಟರು ಮಗುವನ್ನು ಕೊಲ್ಲುತೇನೆ ಅಂತ ಬಂದಾಗ ತಾಯಿ ಅದನ್ನು ಕಾಪಾಡಬೇಕು. ಸುಮ್ಮನೆ ಇದ್ದುಬಿಟ್ಟರೆ ತಾಯಿಯಾಗಿ ಮಾಡಿದ್ದೇನು? ಒಳ್ಳೆಯ ತನ ಅನ್ನೋದು ಮುಟ್ಠಾಳತನ ಆಗಬಾರದು. ಹೊಣೆ ಬಿಡಬಾರದು. ಕೇಳಿದೇವೆ. Passive Resistance ಅಂತ, ನಾನು ಅನೇಕ ವೇಳೆ ಹೇಳಿದೇನೆ ಇದು ನಮಗೆ ಸರಿಯಲ್ಲ ಅಂತ. ಇದು ನಮ್ಮ ಧರ್ಮ ಅಲ್ಲ. ಯುದ್ಧ ಮಾಡಬೇಕು ; ದ್ವೇಷ ಇರಬಾರದು. ಯುದ್ಧ ಮಾಡದೇ ಇದ್ದರೆ ದೇಶದಲ್ಲಿ ಏಕೆ ಎಲ್ಲೂ ಒಳ್ಳೆಯದೇ ಉಳಿಯೋದಿಲ್ಲ.'

ಮುಂದಿನ ಪ್ರಶ್ನೆ ಕೊಂಚ ನನ್ನ ಆಸಕ್ತಿಯ ವಿಷಯವನ್ನು ಕುರಿತದ್ದು ಆಗಿತ್ತು. ನಮ್ಮ ನವೋದಯ ಕಾಲದ ಬರೆಹಗಾರರಲ್ಲಿ ಬಹುಮಂದಿಗೆ ಕನ್ನಡ ಮನೆಯ ಮಾತಾಗಿರಲಿಲ್ಲ. ಆದರೂ ಅದು ಅವರ ಅಭಿವ್ಯಕ್ತಿಯ ಭಾಷೆಯಾಗಿ ಒದಗಿಬಂತು. ಎರಡು ಭಾಷೆಯ ಸಂದರ್ಭದ ಬಗೆಗೆ ಈಗ ನಮ್ಮಲ್ಲಿ ಚರ್ಚೆ ನಡೆಯುತ್ತಿರುವಾಗ ಈ ವಿಷಯದ ಬಗೆಗೆ ಮಾಸ್ತಿಯವರ ಅನುಭವ ಏನೆಂಬುದನ್ನು ತಿಳಿಯುವ ಉದ್ದೇಶ ಇತ್ತು ನನಗೆ. ಹಾಗೆ ಕೇಳಿದೆ. 'ನನ್ನ ಮಾತು ಕನ್ನಡ ಅಲ್ಲ ಅಂದರೆ ಏನು ? ಮನೇಲಿ ಕನ್ನಡ ಆಡಲ್ಲ ಅಂತಾನೆ ? ಆದರೇನು ? ಮಿಕ್ಕಿದ್ದೆಲ್ಲಾ ಕನ್ನಡಾನೇ. ನನ್ನ ಭಾಷೆ ಯಾವುದು ಅಂದರೆ ಕನ್ನಡ ಅನ್ನುತ್ತೇನೆ. ತಮಿಳು ಮನೆಮಾತು. ಮನೇಲಿ ಮಾತನಾಡುವಾಗ ತಮಿಳು ಮಾತಾಡತೇನೆ. ಮಿಕ್ಕಾದಾಗ ಅದು ನನ್ನ ಭಾಷೆ ಅಲ್ಲ. ನನ್ನ ತಾಯಿ ಆಡಿದ ಮಾತು ತಮಿಳು ಮಾತ್ರ ಅಲ್ಲ. ಅವರಿಗೆ ಕನ್ನಡ ಕೂಡ ಬರುತ್ತಿತ್ತು. ನಾನು ಕನ್ನಡದ ಒಳಗೆ ಬೆಳೆದವನೆ. ನನ್ನ ಜನವೆಲ್ಲಾ

ಕನ್ನಡಿಗರೇನೆ. ಹೊಂಗೇನಹಳ್ಳೀಲಿ ಬೆಳೆದೆ. ಮಳವಳ್ಳೀಲಿ ಬೆಳೆದೆ. ಕೃಷ್ಣರಾಜ ಪೇಟೇಲಿ ಬೆಳೆದೆ. ಎಲ್ಲಾ ಕಡೇನೂ ಕನ್ನಡಾನೇ ಇತ್ತು'

ನನ್ನ ಪ್ರಶ್ನೆಯನ್ನು ಸ್ವಲ್ಪ ಸ್ಪಷ್ಟಪಡಿಸುವ ಉದ್ದೇಶದಿಂದ 'ಈಗ ಬರೆಯೋ ಲೇಖಕನಿಗೆ ಅದರಲ್ಲೂ ಕನ್ನಡ ಮನೆಯ ಮಾತಾಗಿರುವವನಿಗೆ ಮನೇಲಿ ಒಂದು ಬಗೆಯ ಕನ್ನಡ, ಶಾಲೆಯಲ್ಲಿ ಒಂದು ಬಗೆಯ ಕನ್ನಡ ಹೀಗೆ ಎರಡು ರೂಪಗಳು ಸಿಕ್ಕುತ್ತಿವೆ. ಇದು ಅವನಿಗೆ ಏನು ಮಾಡುತ್ತಿದೆಯೋ ಅದು ಹಾಗಿರಲಿ; ನಿಮಗೆ ಈ ಪರಿಸ್ಥಿತಿ ಇರಲಿಲ್ಲ ಅಲ್ಲವೇ' ಅಂದೆ.

'ಮೈಸೂರು ದೇಶದಲ್ಲಿ ಬಾಳೋ ಹುಡುಗರಿಗೆ ಈ ಕನ್ನಡವೆಲ್ಲಾ ಒಂದೇ. ನಮಗೆಲ್ಲಾ ಸಿಕ್ಕಿದ್ದು ಒಂದೇ ಕನ್ನಡ. ನಾವು ಬೇರೆ ಭಾಷೆ ಕೇಳಿದ್ದು ಎಷ್ಟು? ಬೇಂದ್ರೆ ಮನೇಲಿ ಕೇಳಿದ್ದು ಎಷ್ಟು? ವೆಂಕಟನಾರಣಪ್ಪನವರು, ನಮ್ಮ ಮೇಷ್ಟ್ರು. ತೆಲುಗು ಎಷ್ಟು ಕೇಳಿದರು? ಹಾಗೆ ವೆಂಕಣ್ಣಯ್ಯನವರು? ಇವರೆಲ್ಲಾ ಏನು ಮಾಡತಾ ಇದ್ದರು? ಯಾವಾಗಲೂ ಕನ್ನಡಾನೇ ಮಾತಾಡತಾ ಇದ್ದರು. ಅವರು ಕೇಳಿದ್ದು ಕೂಡ ಬೀದಿ ಕನ್ನಡಾನೇ. ಓದೋ ಹುಡುಗನಿಗೆ ಶಾಲೆ ಕನ್ನಡ ಎಷ್ಟು ಹೊತ್ತು ಇರತ್ತೆ. ಯಾರಾದರೂ ನನ್ನನ್ನು ಹೊರಗಿನವನು, ಕನ್ನಡ ದೇಶದಲ್ಲಿ ನೆಲೆ ನಿಂತವನು ಅಂದರೆ ಅವರಿಗೆ ತಿಳಿವಳಿಕೆ ಇಲ್ಲ ಅನ್ನುತ್ತೇವೆ...'

ಪ್ರಶ್ನೆಯನ್ನು ನಾನು ಖಚಿತವಾಗಿ ಕೇಳಲಿಲ್ಲವೆನ್ನಿಸಿತು. 'ನಾನು ಆ ಉದ್ದೇಶ ದಲ್ಲಿ ಕೇಳಲಿಲ್ಲ...' 'ಮುಖ್ಯವಾದ ಮಾತು ಇದು. ನಾನು ಒಬ್ಬ ತಮಿಳು ಮನುಷ್ಯ; ಕನ್ನಡದಲ್ಲಿ ಬರೆಯುತ್ತಿದ್ದೇನೆ ಅನ್ನುವುದು ಸರಿಯಲ್ಲ. ನಾನು ಕನ್ನಡಿಗನೆ. ನಾನು ಇದನ್ನು ಅನೇಕ ಸಂದರ್ಭದಲ್ಲಿ ಹೇಳಿದೇನೆ. ನಾನು ತಮಿಳು ಕನ್ನಡಿಗ, ಬೇಂದ್ರೆ ಮರಾಠಿ ಕನ್ನಡಿಗ, ವೆಂಕಣ್ಣಯ್ಯ ತೆಲುಗು ಕನ್ನಡಿಗ, ಮಿರ್ಜಾ ಇಸ್ಮಾಯಿಲ್ ಉರ್ದು ಕನ್ನಡಿಗ.'

ಮುಂದಿನ ಪ್ರಶ್ನೆ: 'ನೀವು ರಾಷ್ಟ್ರೀಯ ಚಳವಳಿ ನಡೀತಿದ್ದ ಕಾಲದಲ್ಲಿ ಅದನ್ನು ಗಮನಿಸುತ್ತ ಇದ್ದವರು. ಅದರ ಬಗೆಗೆ ನಿಮ್ಮ ಪ್ರತಿಕ್ರಿಯೆ ಯಾವ ತರಹದ್ದಾಗಿತ್ತು ಅನ್ನೋದನ್ನ ತಿಳಿಯುವ ಆಸಕ್ತಿ ನನಗೆ.'

'ರಾಷ್ಟ್ರಕ್ಕೆ ಸ್ವಾತಂತ್ರ್ಯ ಬೇಕು ಅಂತ ಎಲ್ಲರಿಗೂ ಅನ್ನಿಸಿದ ಹಾಗೆ ನನಗೂ ಅನ್ನಿಸುತ್ತಾ ಇತ್ತು. ನಾನು Passive Resistance ಗೆ ಹೋಗಲಿಲ್ಲ. ನನಗೆ ಅದರಲ್ಲಿ ನಂಬಿಕೆ ಇರಲಿಲ್ಲ. ಸೈನ್ಯ ಕಟ್ಟೋರು ಇದ್ದಿದ್ದರೆ ನಾನು ಹೋಗಿ ನಿಲ್ಲುತ್ತಿದ್ದೆ ನೇನೋ ಹೇಳಲಾರೆ, ಆದರೆ ಕೊಲ್ಲೋದಾದರೆ ಕೊಲ್ಲು ಅನ್ನೋದು ನನಗೆ ಬರಲಿಲ್ಲ. ಗಾಂಧೀಜಿ ಸ್ವಾತಂತ್ರ್ಯ ಪಡೆದುಕೊಳ್ಳೋದಕ್ಕೆ ಒಂದು ಸಂಸ್ಥೆಯನ್ನು ಏರ್ಪಾಡು ಮಾಡಿದರು. ಅದು ಕಾಂಗ್ರೆಸ್ಸು. ಸೆಕೆಂಡ್ ವರ್ಲ್ಡ್ ವಾರ್ ಆಗದೇ ಇದ್ದಿದ್ದರೆ, ಕೊನೆಯಲ್ಲಿ ಇಂಗ್ಲೆಂಡಿಗೆ ಅಷ್ಟು ಕಷ್ಟ ಆಗದೇ ಇದ್ದಿದ್ದರೆ, ಅವರು ಸ್ವಾತಂತ್ರ್ಯ ಕೊಡತಾ ಇರಲಿಲ್ಲ. ಮಹಾಯುದ್ಧ ಮುಗೀತು. ಪರಂಗಿಯವನಿಗೆ ಇಲ್ಲಿ ಉಳಿಯುವ

ತ್ರಾಣ ಇರಲಿಲ್ಲ. ಅವನ ದೇಶದ ಕೆಲಸಕ್ಕೇ ಜನ ಸಾಕಾಗುತ್ತಿರಲಿಲ್ಲ. ಅವನು ವಿಧಿ ಇಲ್ಲದೆ ಈ ದೇಶವನ್ನು ಬಿಟ್ಟು ಹೋಗಬೇಕಾಯಿತು. ಬಿಟ್ಟು ಹೋದ.'

'ಆ ಕಾಲದಲ್ಲಿ ಅಹಿಂಸಾ ಚಳವಳಿಗೆ ವಿರೋಧ ಇತ್ತು. ಅದರ....

'ವಿರೋಧಿಗಳು ಏನೆಂದರು ? ನಮ್ಮ ದೇಶದ ದಾರಿ ಇದಲ್ಲ. ನಮ್ಮ ದೇಶ ಏನು ಹೇಳಿದೆ ? ಯುಧ್ಯಸ್ವ ವಿಗತ ಜ್ವರಃ ಅಂತ. ನನ್ನ ಮನಸ್ಸು ಹೀಗೇ ಇತ್ತು. ಆದರೆ ನಾನು ಗಾಂಧಿಯವರ ಜತೆ ನಿಂತು ಮಾತಾಡೋ ಮನುಷ್ಯನೇ ? ಅಲ್ಲವಲ್ಲ. ಬರೆಯೋಕೆ ? ನಾನೇನು ಪತ್ರಿಕೆ ಮನುಷ್ಯನೂ ಆಗಿರಲಿಲ್ಲ'.

ಅಲ್ಲಿಂದ ಮುಂದೆ ಇನ್ನೊಂದು ಪ್ರಶ್ನೆಗೆ : ನಮ್ಮ ಸಂಸ್ಕೃತಿಯನ್ನು ಗಮನಿಸಿದ ಹಲವರು ಹೇಳುತ್ತಾರೆ : ನಮ್ಮ ಜನಗಳು ಏನನ್ನೂ ಪ್ರಶ್ನಿಸದೆ ಒಪ್ಪಿಕೊಳ್ಳುತ್ತಾರೆ. ಇದರಿಂದ ಅವರ ಒಟ್ಟಾರೆ ಸ್ಥಿತಿಯಲ್ಲಿ ಬದಲಾಗೋದು ಕಷ್ಟ ಅಂತ. ನೀವು ಇದನ್ನ ಹೇಗೆ ಕಾಣತೀರಿ ?

'ಜನ ಅಂದರೆ ಸಾಮಾನ್ಯ ಜನ ಅನ್ನೋದಾದರೆ ಅವರು ಎಲ್ಲೂ ಏನೂ ಮಾಡೋದಿಲ್ಲ. ಇಂಗ್ಲೆಂಡಿನಲ್ಲಿ ಏನು ಮಾಡುತಿದಾರೆ ? ರಷ್ಯದಲ್ಲಿ ಏನು ಮಾಡತಾ ಇದಾರೆ ? ಜರ್ಮನೀಲಿ ಏನು ಮಾಡತಾ ಇದಾರೆ ? ನಮ್ಮ ಜನ ಏನು ಬಂತು, ಯಾವ ಜನವೂ ಇರೋದೇ ಹಾಗೆ. ಮೇಲೆ ಕುಳಿತ ಹತ್ತು, ಜನ ದೊಡ್ಡವರು ದೊಡ್ಡತನ ಮಾಡತಾ ಇರತಾರೆ. ಉಳಿದವರು ಅವರ ಹಿಂದೆ ಹೋಗತಾರೆ. ಯೋಚನೆ ಮಾಡದೆ ಹೋಗತಾರೆ. ಎಲ್ಲ ಜನಾನೂ ಹಾಗೇ. ಇವತ್ತು ಲೋಕಾನೇ ಹಾಗಿದೆ. ಕೆಲವರು ಯೋಚನೆ ಮಾಡೋರು, ಸರಿ ಇಲ್ಲವಲ್ಲ ಅನ್ನೋರು ನಿಂತು ಕೊಳ್ಳತಾರೆ. ನಾವು ನಾಯಕರು ಅನ್ನುತಾರೆ. ಜನಗಳ ಪಡೆ ಕಟ್ಟುತಾರೆ. ಜನ ಗಳನ್ನು ನಡೆಸುತ್ತಾರೆ. ನಡೆಸುತ್ತಾ ಇರೋರು ಹತ್ತು ಜನ. ಅವರ ಕ್ರಮ ಸರಿ ಅಲ್ಲ ಅನ್ನೋರು ಹತ್ತು ಜನ. ಉಳಿದವರು ಅವರ ಇವರ ಹಿಂದೆ ನಡೆಯುವವರು.'

ಕೊಂಚ ಮುಂದುವರಿದು ಹೇಳಿದೆ : 'ಬೇರೆ ಬೇರೆ ಹಂತಗಳಲ್ಲಿ ಜನರು ಏನು ಮಾಡಿದಾರೆ ಅನ್ನೋದು.' ಅವರು ಹೇಳಿದರು : 'ಇಂದಿನ ಜೀವನ ವೇದಕಾಲ ದಲ್ಲಿ ಇದ್ದ ಹಾಗೆ ಇದೆಯೇ ? ಐದು ಸಾವಿರ ವರ್ಷದಲ್ಲಿ ಬೇರೆಯಾಗಿಲ್ಲವೆ ? ಶಂಕರಾಚಾರ್ಯರು ಏನೂ ಮಾಡಲಿಲ್ಲವೇ? ರಾಮಾನುಜಾಚಾರ್ಯರು ಏನೂ ಮಾಡ ಲಿಲ್ಲವೇ ? ಬಸವಣ್ಣ ? ಇವರೆಲ್ಲಾ ಬಹಳ ಮಾಡಿದರು. ಎಲ್ಲರೂ ಕಲಸ ಮಾಡಿ ದಾರೆ. ಏನೋ ಆಗಬೇಕೂಂತ ಪ್ರಯತ್ನ ಮಾಡಿದಾರೆ. ದುಡಿದ್ದಾರೆ. ಜನಜೀವನ ಬೇರೆ ಮಾಡಬೇಕು ಅಂತ ಕಷ್ಟಪಟ್ಟಿದಾರೆ. ನಾನು ಮತ್ತೆ 'ಜನರು...' ಎನ್ನುತ್ತಾ ನಡುವೆ ಹೋದೆ. ತಡೆದರು 'ಜನರು ಮಾಡೋದಿಲ್ಲಪ್ಪ. ನಾನು ಹೇಳತೇನಲ್ಲಾ ದೊಡ್ಡವನು ಹೇಳಿದ ಹಾಗೆ ಹಿಂದೆ ಹೋಗುತ್ತಾರೆ, ಹೋಗಿದಾರೆ. ಮೈಸೂರು ದೇಶದಲ್ಲಿ ಇಷ್ಟು ಜನ ಶ್ರೀವೈಷ್ಣವ ಇದ್ದಾರೆ. ಯಾರೋ ಗುರುಗಳು ಬಂದರು. ಇದು ಒಳ್ಳೆಯದು ಅಂದರು. ನಾಮ ಹಚ್ಚಿಕೊಳ್ಳಿ ಅಂದರು. ಕೇಳಿದವರು ನಿಂತು

ನಾಮ ಹಚ್ಚಿಸಿಕೊಂಡು ಶ್ರೀವೈಷ್ಣವರಾದರು. ವಿಭೂತಿ ಹಚ್ಚತೀನಿ ಅಂತ ಇತರರು ಬಂದರು. ಅದು ವೀರಶೈವ ಮತ ಅಂತ ಆಯಿತು. ಜನ ಇವರ ಮಾತು ಅವರ ಮಾತು ಹೌದು ಎಂದರು. ಅದರ ಹಿಂದೆ ನಡೆದರು. ಇವತ್ತು ಯಾರೋ ಒಬ್ಬರು ಹಾಗೆ ಸಾಯಿಬಾಬಾ ಅಂತ ಬರತಾರೆ. ಅದ್ಭುತಗಳನ್ನು ಮಾಡತಾರೆ. ಅವರ ಹಿಂದೆ ಸಾವಿರ ಜನ ಹೋಗುತ್ತಾರೆ : ಕಾಲಕಾಲದಲ್ಲಿ ಎಷ್ಟೋ ಮಾರ್ಪಾಟು ಆಗಿದೆ, ಆಗತಾ ಇದೆ, ಮುಂದಕ್ಕೂ ಆಗುತ್ತೆ. 'ಲೋಕ ಇದ್ದ ಹಾಗೆ ಇಲ್ಲವಲ್ಲ ?'

ಮಾಸ್ತಿಯವರ 'ಜೀವನ' ಪತ್ರಿಕೆಯಲ್ಲಿ ಬರೆಯುತ್ತಿದ್ದ ರಾಜಕೀಯ ಧೋರಣೆಗಳ ಬಗೆಗೆ ಒಂದು ಪ್ರಶ್ನೆ ನನ್ನ ಪಟ್ಟಿಯೊಳಗಿತ್ತು. ಕೇಳಿದೆ, 'ಆ ಟಿಪ್ಪಣಿಗಳಲ್ಲಿ ಕಂಡುಬರುತ್ತಿದ್ದ ಒಂದು ಬಗೆಯ ಉದಾರವಾದಿ ಧೋರಣೆ ಈ ಹೊತ್ತಿನ ರಾಜಕೀಯಕ್ಕೂ ಹೊಂದುತ್ತೆ ಅಂತ ತಿಳಿಯುತ್ತೀರಾ ?' ತಕ್ಷಣ ಕೇಳಿದರು 'ಉದಾರ ವಾದಿ ಅಂದರೆ ?' ಅದು ಅವರು ಒಡ್ಡಿದ ಬಲೆ. ನಾನು ಥಟ್ಟನೆ ಉತ್ತರಿಸಿದೆ, 'ಲಿಬರಲ್' ಅವರು ಮತ್ತೆ ಕೇಳಿದರು 'ಹಾಗಂದರೆ ?' ನಾನು ಉಪಯೋಗಿಸಿದ ಪದ ಅವರಿಗೆ ಸರಿ ಕಂಡಿರಲಿಲ್ಲ. ಅದು ನನಗೆ ಗೊತ್ತಾಯಿತು. ಸುಮ್ಮನೆ ಕುಳಿತೆ. ಅವರೇ ಮುಂದುವರಿದರು, 'ಇಂಗ್ಲಿಷ್ ಪದ ಲಿಬರಲ್ ಅನ್ನೋದು ಯಾಕೆ ಬಂತು ? ಅದನ್ನೆ ನಾನು ಕೇಳತೇನೆ. ಅದು ನಮ್ಮ ಪದ ಅಲ್ಲವಲ್ಲ. ಮನೆ ಮಾತು ಕನ್ನಡ ಆದವರು ಅದನ್ನ ಕನ್ನಡದಲ್ಲಿ ಹೇಳೋಕೆ ಸಾಧ್ಯ ಆಗಬೇಕಲ್ಲ. ಹೇಳಿ. ಯಾಕೆ ಆಗೋಲ್ಲ?' ಮತ್ತೆ ನನ್ನ ಉತ್ತರವಿರಲಿಲ್ಲ. ಅವರು : 'ಹೇಳಿ' ಅಂದರು. ನಾನು 'ಚರ್ಚೆಯಲ್ಲಿ ಅಂತ ಮಾತುಗಳನ್ನು ಬಳಸುತ್ತೇವೆ. ಅದು ರೂಢಿಯಾಗಿ ಹೋಗಿದೆ. ಅದು ತಪ್ಪು ಅಂತ...' 'ತುಂಬಾ ತಪ್ಪು. ನಮ್ಮ ಅನುಭವ ಅಲ್ಲ ಅದು. ಅದನ್ನು ಹೊರಗಿನಿಂದ ತಕ್ಕೊಂಡು ಪ್ರತಿ ಮಾಡುತಾ ಇದೇವೆ. ನಮ್ಮ ಮಾತು ಅನುಕರಣ ಆಗಿಬಿಟ್ಟಿದೆ. ಹೊರಗಿನ ಮಾತನ್ನು ಪ್ರತಿ ಮಾಡತಾ ಇದೇವೆ. ಒಳಗೆ ಅಲ್ಲ. ಮುಖವಾಡ ಮಾಡಿಕೊಂಡು ಬಿಟ್ಟಿದೇವೆ ಶಬ್ದಗಳನ್ನು. ಲಿಬರಲ್ ಶಬ್ದದ ಅರ್ಥ ಹೇಳಿ ನೋಡೋಣ. ನಮ್ಮ ಮಾತಲ್ಲಿ ಹೇಳಿ.' ನಾನು ಇನ್ನು ಪದವನ್ನು ಕುರಿತು ಮುಂದುವರಿಯುವುದು ಸಾಕು ಎಂದುಕೊಂಡು ಹೀಗೆ ಕೇಳಿದೆ 'ಆ ಟಿಪ್ಪಣಿಗಳಲ್ಲಿ ನೀವು ತಾಳುತ್ತಿದ್ದ ಧೋರಣೆಯೊಂದು ಇದ್ದಿತಲ್ಲ. ಅದು ಈಗಲೂ ರಾಜಕೀಯದ ಸಂದರ್ಭಕ್ಕೆ ಹೊಂದುತ್ತೆ ಅಂತ ನೀವು ಭಾವಿಸುತ್ತೀರಾ ?'

ಅವರೆಂದರು : 'ರಾಜಕೀಯದಲ್ಲಿ ಮಾತ್ರ ಅಲ್ಲ. ಯಾವಾಗಲೂ ಒಂದೇ ದಾರಿ ಸರಿಯಾದದ್ದು. ಸಮಾಧಾನವಾಗಿ ಇರಬೇಕು. ನನ್ನದೇ ಮಾತು ಅಂತ ಹಠ ಮಾಡಬಾರದು. ಎದುರಾಳಿಯುದು ತಪ್ಪು ಅಂತ ಅಹಂಕಾರ ಮಾಡಬಾರದು. ಕೆಟ್ಟ ಮಾತು ಆಡಬಾರದು. "ಏನು ಹೇಳತಿ ಹೇಳಪಾ" ಅನ್ನಬೇಕು. "ನೀನು ನನ್ನ ಸೋದರ. ನನ್ನ ಸ್ನೇಹಿತ. ನನಗೆ ಹಗೆ ಅಲ್ಲ. ಲೋಕದಲ್ಲಿ, ನೀನು ನಾನೂ

ಜೊತೆ. ಇಬ್ಬರೂ ಕಾಡಿನಲ್ಲಿ ಇದೇವೆ. ಹೊರಗೆ ಹೋಗೋದಕ್ಕೆ ದಾರಿ ಕಾಣಬೇಕು. ನಿನಗೆ ಯಾವುದು ಕಾಣುತ್ತೆ ಹೇಳು ಯೋಚನೆಮಾಡೊ ೀಣ. ಯಾರಿಗೆ ಏನು ತೋರುತ್ತೋ ಹೇಳೋಣ, ಕೇಳೋಣ. ಈ ಸಮಾಧಾನದ ಹೊರತು ಬೇರೆ ದಾರಿ ಇಲ್ಲವೇ ಇಲ್ಲ. ಧರ್ಮದಲ್ಲೇ ಆಗಲಿ, ರಾಜಕೀಯದಲ್ಲೇ ಆಗಲಿ, ದಿನದ ಬಾಳ್ಕೆ ಯಲ್ಲೇ ಆಗಲಿ ಯಾವ ಕೆಲಸದಲ್ಲೂನೂ ಜೊತೆಯಲ್ಲಿರೋ ಜನರೊಂದಿಗೆ ವಿಶ್ವಾಸ ವಾಗಿ ನಡಕೊಳ್ಳೋದು ಒಳ್ಳೇ ದಾರಿ. ಯಾವುದು ಒಳ್ಳೆಯದು ಅಂತ ವಿಚಾರ ಮಾಡೋದು ; ಒಳ್ಳೆ ನಿರ್ಣಯ ಮಾಡೋದು ; ಅದರಂತೆ ನಡೆಯೋದು. ಬದುಕುವ ದಾರಿ ಇದೊಂದೆ. ಬೇರೇದು ಇಲ್ಲವೇ ಇಲ್ಲ. ಉದಾರವಾದವೋ ಮತ್ತಾವದಾದರೂ ವಾದವೋ ಗೊತ್ತಿಲ್ಲ ನನಗೆ. ಸಮಾಧಾನಿಯಾಗಿ ದೊಡ್ಡವ ನಾಗಿ ಬದುಕಬೇಕು ಮನುಷ್ಯ. ಎದುರಾಳೀನ ದೊಡ್ಡವನಾಗಿ ಬೆಳೆಸಬೇಕು. ದೊಡ್ಡವನಾಗೋಕೆ ಒಳ್ಳೆಯವನಾಗೋಕೆ ಬದುಕೋಕೆ ದಾರಿ ಏನಿದೆ ಅದನ್ನು ಕಾಣಬೇಕು...... ಪರಂಗಿಯವರ ಮಾತು ನನಗೆ ಬೇಕಿಲ್ಲ. ಹೊರಗಿನ ಮಾತು ಯಾಕೆ ಬೇಕು ? ನಿಮ್ಮ ಮನಸ್ಸಿನಲ್ಲಿ ಭಾವನೆ ಇದ್ದರೆ ಅದಕ್ಕೆ ಹೆಸರು ಇಲ್ಲವೆ ? ನಮ್ಮ ಮಕ್ಕಳಿಗೆ ನಾವು ಅಂಡ್ರ್ಯೂ, ಜಾನ್ ಅಂತ ಹೆಸರಿಡಲಿಲ್ಲವಲ್ಲ. ನಾವು ಕಿಟ್ಟು, ರಾಮು, ಲಲಿತ, ಸರೋಜಿನಿ, ಅಂತ ಇವೆಯಲ್ಲ ಹೆಸರುಗಳು ನೂರು, ಅವನ್ನು ತಾನೇ ಇಡೋದು ? ಅದಕ್ಕೆ ಯಾಕೆ ಬೇರೆ ಹೆಸರು ? ಸ್ವತಂತ್ರವಾಗಿ ಬಾಳೋಕೆ ಯೋಗ್ಯತೆಯೇ ಇಲ್ಲವೇ ನಮಗೆ ? ನಮ್ಮ ಅನುಭವ ಹೇಳಿ. ಹೊರಗಿನ ಜನರ ಮಾತನ್ನು ಕಟ್ಟಿಕೊಂಡು ಅವರ ಹಾಗೆ ಮಾತಾಡೋದು ನನಗೆ ಬೇಕಿಲ್ಲ. ಅದು ಅವರ ಮಾತು ಅವರು ಆಡುತಾರೆ. ಅವರ ಸೀಮೆ ಗಾಳಿ ಬೇರೆ. ಅವರ ಸೀಮೆ ಬಿಸಿಲು ಬೇರೆ. ಅವರ ಬಾಳ್ಮೆ ಬೇರೆ ನಮ್ಮದು ಬೇರೆ. ನಾವು ಇಲ್ಲಿಯ ಮಾತನ್ನು ಆಡಬೇಕು. ನಮ್ಮ ಜನ ಬಾಳಲೇ ಇಲ್ಲವೆ ? ಪರಂಗಿಯವರನ್ನು ನೋಡಿಕೊಂಡೇ ಬಾಳಿದರೆ ಯಾವಾಗಲೂನೂ ? ಜನ ನಡೀತಾ ಇತ್ತು. ರಾಮನ ರಾಜ್ಯ ಭಾರ ಚೆನ್ನಾಗಿತ್ತು ಅಂತ ಹೇಳಿದಾರೆ. ಚೆನ್ನ ಆದದ್ದು ಬೇರೆಯವರಂತೆ ಇದ್ದದ್ದರಿಂದ ಅಲ್ಲ. ಇವತ್ತು ಯಾಕೆ ಪರಂಗಿಯವರ ವಿಚಾರ ನಮಗೆ ? ಅವರು ಮಾಡಿದ್ದರಲ್ಲಿ ಒಳ್ಳೆಯದು ಇದ್ದರೆ ಅದರಂತೆ ಮಾಡೋಣವಂತೆ. ಆದರೆ ನಮ್ಮ ದಾರಿ ಯಾವುದು ಅಂತ ನೋಡಿ ನಾವು ಅದನ್ನು ಹಿಡಿಯಬೇಕು. ಅವರು ಮಾಡುತಾ ಇರೋದೆ ಚೆನ್ನಾಗಿದೆ ಅಂತ ಕಂಡರೆ ಹಾಗೇ ಮಾಡಬಹುದು. ನಮ್ಮ ದಾರಿ ನಾವು ಕಂಡು ಕೊಂಡು ಅದನ್ನ ಹಿಡಿಬೇಕು. ಯೋಚನೆ ಮಾಡಬೇಕು. ಅವರು ಮಾಡಿದರು ಅಂತ ಎಲ್ಲ ವಿಚಾರ ಕೂಡ ನಾವು ಮಾಡತೇವೆ ಎನ್ನೋದು ಸರಿಯಲ್ಲ.' ಇನ್ನೊಂದು ಪ್ರಶ್ನೆ ತೆಗೆದೆ : ಮಾಸ್ತಿಯವರು ಅಧಿಕಾರಿಯಾಗಿದ್ದವರು. ಈ ಹೊತ್ತಿನ ದಿನ ಗಳಲ್ಲಿ ಸಮಾಜದಲ್ಲಿ ಆಗುವ ಬದಲಾವಣೆಗಳಿಗೆ ಬೆಳೆದು ಭದ್ರವಾಗಿ ನಿಂತಿರುವ ಅಧಿಕಾರ ವರ್ಗ ತನ್ನ ಹಿತಾಸಕ್ತಿಗೆ ವಿರುದ್ಧವಾದುದು ಅನ್ನುವ ಕಾರಣದಿಂದ ಅಡ್ಡಿ.

ಬರುತ್ತೆ ಅನ್ನುವ ಮಾತು ಕೇಳಿಬರುತ್ತಿದೆ. ಮಾಸ್ತಿಯವರು ಈ ಬಗೆಗೆ ಏನು ಹೇಳುವವರು ಎಂದುಕೊಂಡು ಅದನ್ನವರಿಗೆ ಕೇಳಿದೆ.

ಅವರ ಉತ್ತರ : 'ಅಧಿಕಾರ ವರ್ಗ ಎಷ್ಟಿದೆ? ಅಷ್ಟು ಕೊಳ್ಳೆ ಹೋದದ್ದು ? ನೂರರಲ್ಲಿ ಇಬ್ಬರೊ ಮೂವರೋ ಇದ್ದಾರೋ ಇಲ್ಲವೋ. ಈ ನಾಲ್ಕಾರು ಜನ ಏನಾದರೂ ಮಾಡಲು ಸಾಧ್ಯವೇ ? ನಾಯಕರು ಏನಾದರೂ ಮಾಡಬಹುದು. ಆದರೆ ಜನ ಹೊರಟರೆ ಅಧಿಕಾರಿ ವರ್ಗ ತಡೆಯೋಕೆ ಆಗೋಲ್ಲ. ಅಧಿಕಾರ ವರ್ಗ ಕೊಚ್ಚಿಕೊಂಡು ಹೋಗುತ್ತೆ. ಅಧಿಕಾರದಲ್ಲಿ ಇದ್ದುಕೊಂಡು ಏನು ಮಾಡಬಹುದು? ದುಡ್ಡು ಮಾಡಿಕೊಳ್ಳಬಹುದು. ನಾಲ್ಕು ದಿನ ನಡೆದೀತು. ಐದನೇ ದಿನ ಕೊಲೆಯಾಗುತ್ತೆ. ಮೊದಲು ಹೇಳತಾ ಇರಲಿಲ್ಲವೇ ಕಳ್ಳನ ಹೆಂಡತಿ ಎಂದಿದ್ದರೂ ಮುಂಡೆ ಅಂತ. ಹಾಗೆ. ರಶ್ಯಾದ ಜಾರ್‌ಗಿಂತಲೂ ಹೆಚ್ಚಿನ ಅಧಿಕಾರಿ ವರ್ಗ ಇರೋಕೆ ಸಾಧ್ಯವಿಲ್ಲ. ಏನಾದ ಜಾರ್ ? ಜಾರ್ ಮಾಡಿದ ಪಾಪ ಅವನ ಮಕ್ಕಳನ್ನೆಲ್ಲಾ ತಿಂದು ಹಾಕಿತು. ಜಾರ್ ತುಂಬಾ ಅನ್ಯಾಯ ಮಾಡಿದ. ಒಂದು ಸಲ ಯಾವುದೋ ರಿಫಾರ್ಮ್ ಮಾಡಿ ಅಂತ ಕೇಳೋಕೆ ಐದಾರು ಸಾವಿರ ಜನ ಅವನ ಮನೆಗೆ ಹೋದರು. ಮುತ್ಠಾಳ ಅರಮನೇಲಿ ನಿಂತುಕೊಂಡು ಸೈನ್ಯಾನಾ ಕರೆದು ಷೂಟ್ ಅಂತ ಹೇಳಿದ. ಅವರು ಜನವನ್ನು ಸುಟ್ಟರು. ಕೇಳಿದೀರೋ ಇಲ್ಲವೋ? 1905 _ 6ರಲ್ಲಿ ಇದು ನಡೆದದ್ದು. ಸರಿಯಾಗಿ ಹನ್ನೆರಡು ವರ್ಷದ ಆಚೆಗೆ ಜನ ಜಾರ್‌ನ ಹೆಣ್ಣು ಮಕ್ಕಳು ಮೂರು ಜನಾನ ಗೋಡೆ ಹತ್ತಿರ ನಿಲ್ಸಿ ಗುಂಡು ಹೊಡೆದು ಕೊಂದರು. ಜಾರ್ ತನ್ನ ಮಕ್ಕಳನ್ನು ಕೊಲ್ಲೋದಕ್ಕೆ ಹನ್ನೆರಡು ವರ್ಷದ ಮೊದಲೇ ಏರ್ಪಾಡು ಮಾಡಿದ್ದ. ಅವನಿಗೆ ಅದು ಗೊತ್ತಿರಲಿಲ್ಲ. ಆದರೆ ಮಾಡಿದ ಕೆಲಸ ಮಾತ್ರ ಇಷ್ಟೇನೆ.'

ನಮ್ಮ ಸುತ್ತ ನಡೆಯುತ್ತಾ ಇರೋ ಸಾಮಾಜಿಕ ಬದಲಾವಣೆಗಳ ಬಗೆಗೆ ಮಾಸ್ತಿಯವರ ಪ್ರತಿಕ್ರಿಯೆ ತಿಳಿಯಬಯಸಿ ರೂಪಿಸಿದ ಪ್ರಶ್ನೆಯನ್ನು ಕೇಳಿದೆ. 'ಮೂಲದಲ್ಲಿ ಏನೂ ಬದಲಾವಣೆ ನನಗೆ ಕಾಣಬರುತ್ತಿಲ್ಲ. ಯಾವ ಕಾಲದಲ್ಲೂ ಮುಠ್ಠಾಳರು ಇದ್ದಾರೆ. ಹಾಗೇನೆ ಜಾಣರೂ ಯಾವಾಗಲೂ ಇದ್ದೇ ಇರುತ್ತಾರೆ. ಅವತ್ತು ಇದ್ದ ಹಾಗೆಯೇ ಈಗ ಕೂಡ. ವಿವರ ಕೆಲವು ಬೇರೆ ಆಗಿರುತ್ತದೆ. ಒಟ್ಟಿನಲ್ಲಿ ಬಹಳ ಆಗಿರುವುದಿಲ್ಲ.'

ನಾನು ಕೇಳಿದೆ 'ಕಳೆದ ಒಂಭತ್ತು ದಶಕಗಳಿಂದ ನೀವು ನೋಡುತ್ತಿರುವುದರಲ್ಲಿ ಜನ ಬದುಕುವ ಕ್ರಮ ಹಾಗೇ ಇದೆಯೇ ?'

'ಬಹಳ ಮಟ್ಟಿಗೆ ಹಾಗೇ ಇದೆ. ಏನೋ ಒಂದು ಹೊತ್ತಿನಲ್ಲಿ ಹೀಗೆ ಮಾಡಿದರೆ ಚೆನ್ನಾಗಿತ್ತು ಹಾಗೆ ಮಾಡಿದರೆ ಚೆನ್ನಾಗಿತ್ತು ಅಂತಾ ಹೇಳಬಹುದು. ಹಾಗೆ ಹೇಳುವವರು ಹೇಳತಾನೆ ಇರತಾರೆ. ಯಾವುದೋ ಒಂದು ನಡೀತಾನೇ ಇರುತ್ತೆ. ಯಾವುದೂ ಯೋಚನೆ ಮಾಡಿ ಮಾಡಿದ್ದಲ್ಲ. ರಿಫಾರ್ಮ್, ರಿಫಾರ್ಮ್ ಅಂತ

ಜನ ಹೇಳತಾರಲ್ಲ. ಯಾರೂ ರಿಫಾರ್ಮ್ ಮಾಡಲಿಲ್ಲ. ತಾನೇ ರಿಫಾರ್ಮ್ ಆಗಿದೆ, ಒಳಗಿನಿಂದ. ಅದರಲ್ಲಿ ಅಷ್ಟು ಒಳ್ಳೆಯದು, ಅಷ್ಟು ಕೆಟ್ಟದು ಇದೆ.'

'ಹಾಗಾದರೆ ಈ ಬದಲಾವಣೆಗಳ ಹಿಂದಿನ ಶಕ್ತಿಗಳು ಯಾವುವು ಅಂತ ನೀವು ತಿಳೀತೀರಾ?'

'ಪ್ರತ್ಯೇಕ ಶಕ್ತಿ ಏನೂ ಇಲ್ಲ. ಜೀವನದ ಪ್ರವಾಹವೇ ಹಾಗಿದೆ. ಜೀವನದಲ್ಲಿ ವ್ಯತ್ಯಾಸಗಳು ಆಗುತಲೇ ಇವೆ. ಯಾವುದೋ ಒಂದು ಕಾರಣ. ಇಂಗ್ಲಿಷ್ ಬಂತು ವಿದ್ಯೆಗೆ. ಅನೇಕ ಸಂಗತಿಗಳು ಬಂದು ನಮಗೆ ತಿಳಿದು ನಾವು ಬುದ್ಧಿವಂತ ರಾದೆವು. ಹಿಂದೆ ಒಂದು ಕಾಲದಲ್ಲಿ ಐವತ್ತು ಸಂಗತಿ ಕೆಟ್ಟದು ಇದ್ದವು. ಜನ ತಿದ್ದಿ ಕೊಂಡರು. ಒಳ್ಳೆಯದನ್ನು ಕೆಟ್ಟದನ್ನು ಆಯ್ಕೆ ಮಾಡಿದೆವು. ಕಟ್ಟುನಿಟ್ಟು ಹೆಚ್ಚಾಯಿತು ಎಂದರು. ಸ್ವಾತಂತ್ರ್ಯ ವಹಿಸಿದೆವು. ಅದರ ಹೆಸರಿನಲ್ಲಿ ಹತ್ತು ಒಳ್ಳೆಯದನ್ನು ಬಿಟ್ಟುಬಿಟ್ಟೆವು. ಕಟ್ಟು ನಿಟ್ಟು ಅತಿ ಆಗಬಾರದು, ನಿಜ. ಆದರೆ ಅವು ತೀರಾ ಇಲ್ಲದೇನೂ ಹೋಗಬಾರದು. ಇವತ್ತು ಕೂಡಾ ಹಾಗೇ ಯೋಚನೆ ಮಾಡತಾರೆ. ಹಾಗೆ ಮಾಡತಾರೆ. ಯಾವುದೋ ಒಂದು ನಡೀತಾ ಇರುತ್ತೆ. ಯಾವ್ಯಾವುದೋ ಕಥೆಗಳನ್ನು ಕೇಳತೇವೆ. ಧರ್ಮದಲ್ಲೇ ಆಗಲೀ, ರಾಜಕೀಯದಲ್ಲೇ ಆಗಲೀ ಸಮಾಜದಲ್ಲೇ ಆಗಲೀ ಎಲ್ಲದರಲ್ಲೂ ಒಳ್ಳೇದು ಕೆಟ್ಟದ್ದು ಆಗತಾನೆ ಇರುತ್ತೆ. ಹಿಂದಿನ ಕಾಲದಲ್ಲಿ ಕೇಳಿದೇವೆ. ಕಾಸು ಕೊಟ್ಟು ಹುಡಿಗೀನ ಪಡೀತಿದ್ದರು. ಆಗ ಕನ್ಯಾಶುಲ್ಕ. ಈಗಬಾಲ ಶುಲ್ಕನೋ, ಯುವಶುಲ್ಕಾನೊ ಕೊಟ್ಟು ಹುಡುಗನ್ನ ಕೊಂಡುಕೋತಾರೆ ಹೆಣ್ಣುಮಕ್ಕಳನ್ನ ಹೆತ್ತವರು. ಇದೆಲ್ಲ ರಿಫಾರ್ಮ್ ಅಂತ ಬಂತೆ? ಜನ ಯೋಚನೆ ಮಾಡಿ ತಿದ್ದಬೇಕೂ ಅಂತ ಬಂತೇ? ತಾನೇ ಬಂತು. ಈಗಲೂ ಅಷ್ಟೇ, ಇದು ಯಾವುದೂನೂ ಸಭೆ ಸೇರಿ ಯೋಚನೆ ಮಾಡಿ ನಿರ್ಣಯಕ್ಕೆ ಬಂದದ್ದಲ್ಲ. ಹಿಂದಿನ ಕಾಲದಲ್ಲಿ ಹುಡುಗೀರು ಮೈನೆರೆಯುವುದಕ್ಕೆ ಮೊದಲು ಮದುವೆ ಮಾಡಿಬಿಡುತ್ತಿದ್ದರು. ಮೈ ನೆರೆದಮೇಲೆ ಮದುವೆ ಮಾಡುವುದು ಅಪರಾಧ ಅಂತ ಇತ್ತು. ಇವತ್ತು? ಹಾಗೆನ್ನುತ್ತಿದವರ ಹೆಣ್ಣು ಮಕ್ಕಳೆಲ್ಲ ಮದುವೆ ಯಾಗೋಕೆ ಮುಂಚೆ ದೊಡ್ಡವರಾದವರೇ. ಹಿಂದೆ ಬಹಿಷ್ಕಾರ ಹಾಕತಾ ಇದ್ದರು, ಈಗ ಯಾರಾದರೂ ಅವರ ತಂಟೆಗೆ ಹೋಗುತಾರೊ? ಆಚಾರವಂತ ಅನ್ನೋನು ಏನಾದರೂ ಹೇಳಿದರೆ ಹೋಗೋ ಮುಠ್ಠಾಳ ಅನ್ನತಾರೆ."

'ಈ ಬದಲಾವಣೆಗಳೆಲ್ಲಾ, ನಡೆದಿವೆಯಲ್ಲಾ, ಇವು ನಮ್ಮ ಬದುಕಿಗೆ ಒಳ್ಳೆಯ ದನ್ನು ಮಾಡಿವೆ ಅಂತ ನಿಮಗೆ ಅನ್ನಿಸುತ್ತಾ ಇದೆಯೊ?'

'ಒಳ್ಳೆಯದು ಅನ್ನಿಸದೇ ಇದ್ದಿದ್ದರೆ ಯಾಕೆ ಮಾಡುತಾ ಇದ್ದರು? ಗುಣ ಇಲ್ಲದಿದ್ದರೆ ಮಾಡತಾ ಇದ್ದರೇ? ಒಳ್ಳೇದು ಆಗಿರೋದರಿಂದಲೇ ಎಲ್ಲರೂ ಆಚರಿಸಿದರು. ಯಾವಾಗಲೂ ಬರೀ ಒಳ್ಳೇದೇ ಆಗೋದಿಲ್ಲ. ಒಳ್ಳೇದು, ಕೆಟ್ಟದ್ದು

ಎರಡೂ ಇರುತ್ತೆ. ಎಲ್ಲದಕ್ಕೂ ಉಪಯೋಗ ದುರುಪಯೋಗ ಎರಡೂ ಇದ್ದೇ ಇರುತ್ತೆ.'

ಇಲ್ಲಿಗೆ ನನ್ನ ಪ್ರಶ್ನೆಗಳ ಪಟ್ಟಿ ಮುಗಿದಿತ್ತು. ಅವರು ಮಾತು ಮುಗಿಸುತ್ತಾ ಹೇಳಿದರು. ಅದು ಕೂಡ ದಾಖಲಾಗಲು ತಕ್ಕದ್ದು. 'ಯೋಚನೆ ಮಾಡಿರಪ್ಪಾ; ಆತುರ ಮಾಡಿಕೊಳ್ಳಬೇಡಿ. ಇನ್ನೊಬ್ಬರು ಒಂದು ಹೇಳತಾರೆ ತಿಳಿದುಕೊಳ್ಳಿ. ತಿಳಿದು ಕೊಂಡು ಸಮಾಧಾನವಾಗಿ ಮಾತನಾಡಿ. ಎಲ್ಲರೂ ಜೊತೆಯಾಗಿ ಕೆಲಸ ಮಾಡಿ. ಏನು ಕೆಲಸ ಮಾಡಬೇಕು ಅನ್ನೊದನ್ನು ಜ್ಞಾಪಕ ಇಟ್ಟುಕೊಳ್ಳಿ. ಒಬ್ಬರಿಗೊಬ್ಬರು ಶತ್ರುಗಳಲ್ಲ. ನೀವು ಜಗಳಾ ಆಡೋಕೆ ಬಂದಿಲ್ಲ. ಎಲ್ಲರೂ ಕುಳಿತುಕೊಂಡು ಮಾತನಾಡಿ. ಯಾವುದು ಒಳ್ಳೇದು ಸಮಾಜಕ್ಕೆ ಹೇಳಿ. ದೇಶಕ್ಕೆ ಏನು ಬೇಕು ಅಂತ ಹೇಳಿ. ಆದರೆ ಈಗ ಏನಾಗತಾ ಇದೆ ? ಅಸೆಂಬ್ಲೀಲಿ ''furore'' ಅಂತ ಪತ್ರಿಕೆ ವರದಿ. ಅಸೆಂಬ್ಲಿ ಇರೋದು ಫ್ಯೂರರ್‌ಗೋಸ್ಕರವೇ ? ಬೇರೆ ಬೇರೆ ಅಭಿಪ್ರಾಯ ಇದ್ದೇ ಇರುತ್ತೆ. ಯಾವುದು ಸರಿ ಯೋಚನೆ ಮಾಡೋಣ. ಪಾರ್ಲಿಮೆಂಟು ಯಾತಕ್ಕೆ ಇರೋದು ? ಡೆಮಾಕ್ರಸಿ ಎಂದರೆ ಏನು ? ಅದೂ ಕೂಡಾ ಗೊತ್ತಿಲ್ಲ ಇವರಿಗೆ. ಪ್ರತಿನಿಧಿ ಅಂತ ಕೂತು ಕೆಟ್ಟ ಮಾತು ಆಡತಾರೆ. ಒಬ್ಬರ ನ್ನೊಬ್ಬರು ಹೊಡೀತೇನೆ ಅನ್ನತಾರೆ. ಚಪ್ಪಲಿ ಎತ್ತಿ ತೋರಿಸುತ್ತಾರೆ. ನಮ ಊರುಗಳ ಚಾವಡೀಲಿ ನಮ್ಮ ಜನ ಮರ್ಯಾದೆಯಾಗಿ ನಡೆದುಕೊಳ್ಳುತ್ತಿದ್ದರು. ಒಬ್ಬ ಕೆಟ್ಟ ಮಾತಾಡಿದರೆ ಪಟೇಲನಾದೋನು, ಶಾನುಭೋಗನಾದೋನು ಪುರೋಹಿತನಾದೋನು, "ಅಪ್ಪ. ಕೆಟ್ಟಮಾತು ಆಡತಾ ಇದೀಯಾ" ಅನ್ನೋರು. ಬಾಯಿ ಮುಚ್ಚಿಕೊಳ್ಳೋನು ಅವನು. ಇನ್ನೂ ಹಾಗೆ ಮಾತಾಡಿದರೆ ಅವರು "ನೀನು ಮಾತಾಡೋದು ಸರಿಯಾಗಿಲ್ಲ. ಹೊರಗೆ ನಿಲ್ಲು" ಅನ್ನುತಿದ್ದರು. ಬೇರೇ ಏನೂ ಮಾಡತಾ ಇರಲಿಲ್ಲ. ಚಪ್ಪಲಿ ತೋರಿಸತಾ ಇರಲಿಲ್ಲ. ಇದು ನಮ್ಮ ಜನ ನಡೆದುಕೊಂಡ ರೀತಿ. ಈ ಜನಕ್ಕೆ ಅದು ಆಗದೇ ಹೋಗಿದೆ ಪಾರ್ಲಿಮೆಂಟಿನಲ್ಲಿ, ಇವರು ನಮ್ಮ ಪ್ರತಿನಿಧಿಗಳಂತೆ. ಇವರ ದಾರಿ ನಮ್ಮ ಜನಗಳದಾಗಲಿಲ್ಲ.'

'ಇಂಥವರು ಆಳತಾ ಇದ್ದಾರಲ್ಲ ಅದಕ್ಕೇನು ಮಾಡೋಣ'

'ಏನು ಮಾಡೋದು ? ಹಾಗಿದೆ. ದುರ್ಯೋಧನ ಆಳತಾ ಇದ್ದ. ಗ್ರಾಮದ ಜನ, ಪಟ್ಟಣದ ಜನ ಏನು ಮಾಡತಾ ಇದ್ದರು ? ರಾವಣ ಆಳತಾ ಇದ್ದ ಲಂಕೇಲಿ. ಲಂಕೆ ಜನವೆಲ್ಲಾ ಹೋಗಿ ಅವನಿಗೆ ಹೇಳಿದರೇ ? ಅವನು ಮಾಡಿದ್ದು ಸರಿ ಅಂತ ? ಯಾರದೋ ಹೆಣ್ಣು ಮಗಳನ್ನ ತಕ್ಕೊಂಡು ಬಂದು ನಾವೆಲ್ಲಾ ಆಳೋ ಹಾಗೆ ಮಾಡಿದ ಅಂದರು ; ಬೈದರು. ಜನ ಏನು ಮಾಡುತ್ತಪ್ಪಾ ? ಯಾವಾಗ ಲೂನೂ ಶಕ್ತಿಯುಳ್ಳವನು ಏನೋ ಮಾಡುತಾನೆ. ಕೆಟ್ಟವನಾಗಿದ್ದರೆ ಜನಗಳಿಗೆ ನೋವು ಕೊಡುತಾನೆ.ಒಳ್ಳೆಯವನಾಗಿದ್ದರೆ ದೇವರ ಹಾಗೆ ಕಾಪಾಡತಾನೆ. ಒಟ್ಟು ಮಾತು ಇದು. ಎಲ್ಲರೂ ಕಾಡಿನಲ್ಲಿ ಇದೇವೆ, ಹೊರಗೆ ಹೋಗೋ ದಾರಿ ನೋಡ

ಬೇಕು ನಾವು ಅಂದೆನಲ್ಲ. ಜಗಳ ಮಾಡಿದರೆ ದಾರಿ ಕಾಣೋಲ್ಲ. ದಾರಿ ಯಾವುದು ಕಾಣುತ್ತೆ ಅಂತ ಒಬ್ಬರು ಇನ್ನೊಬ್ಬರಿಗೆ ತಿಳಿಸಿ ಹೇಳಬೇಕು'.

'ಹಾಗಾದರೆ ಜನಗಳಿಗೆ ಈ ಜವಾಬ್ದಾರಿಯನ್ನು ತಿಳಿಸಿ ಹೇಳೋ ಹೊಣೆಯಾರ ಮೇಲೆ ಇದೆ ಅಂತ ಭಾವಿಸುತೀರಾ ?'

'ನಾ ಬಲ್ಲೆ ಅನ್ನೋ ಎಲ್ಲರ ಮೇಲೂ ಇದೆ. ನನ್ನ ಮೇಲೂ ಇದೆ. ನಾನು ಹೇಳಿದೇನೆ ಇದೇ ಮಾತು. ಜಗಳ ಆಡಬೇಡಿ. ಸಮಾಧಾನವಾಗಿರಿ. ಆದರೆ ಕೇಳೋರು ಯಾರು ? ಹೇಳೋದು ಮಾತ್ರ ಅಲ್ಲದೆ ಬೇರೇನು ಮಾಡೋಕೆ ಆಗುತ್ತೆ ನನ್ನಂಥವನಿಗೆ ? ನಾನು ಹೇಳೋದನ್ನು ನಾನು ಹೇಳಿದೇನೆ. ನಿರ್ಣಯಾನ ನಿಮ್ಮ ಇಷ್ಟಕ್ಕೆ ಬಿಟ್ಟಿದ್ದೇನೆ ಅನ್ನೋದು ಅಲ್ಲವ ?'

ಮಾಸ್ತಿಯವರು ಈ ಮಾತನ್ನು ನೋವಿನಿಂದ ಆಡಿರಬಹುದೇ ಎಂದುಕೊಂಡು ಹಾಗೆ ಅವರನ್ನು ಕೇಳಿದೆ. ಅವರೆಂದರು 'ನೋವು ಯಾಕೆ ? ಹಿಂದೆ ಕೇಳಲಿಲ್ಲ ಈಗಲೂ ಕೇಳೋದಿಲ್ಲ. ಲೋಕದ ಚರಿತ್ರೇನೇ ಹಾಗಿದೆಯಲ್ಲ; ನನಗಿಂತ ಸಾವಿರ ಪಟ್ಟು ದೊಡ್ಡವರು, ನನ್ನ ಗುರು ವ್ಯಾಸನೇ ಹೇಳಿದ "ಊರ್ಧ್ವ ಬಾಹುರ್ವಿ ರೌಮ್ಯೇಷ ನತು ಕಶ್ಚಿತ್ ಶೃಣೋತಿ ಮೇ। ಧರ್ಮಾದರ್ಥಶ್ಚ ಕಾಮಶ್ಚ ಸ ಕಿಮರ್ಥಂ ನ ಸೇವ್ಯತೇ"॥ "ಅಂತ ಯಾವುದು ಸರಿಯಾದದ್ದು ಅಂತ ನಾನು ಎರಡೂ ಕೈಗಳನ್ನು ಎತ್ತಿ ಕೂಗಿ ಹೇಳತಿದೇನೆ. ಯಾರೂ ಕೇಳೋರೇ ಇಲ್ಲ, ಎಲ್ಲರೂ ಸುಮ್ಮನೇ ಹೋಗತಾ ಇದಾರೆ" ಅಂದ : ಭಾರತದಲ್ಲಿ ಬರುತ್ತೆ ಈ ಮಾತು. ವ್ಯಾಸನಾದೋನೆ ಹಾಗೆ ಹೇಳಿ ಗೋಳು ಇಡಬೇಕಾದರ ನಾನೇನು ಮಾಡಬೇಕು ? ನನ್ನಂತೆ ಮಾತ ನಾಡೊ ಹತ್ತು ಜನ ಏನು ಮಾಡಬೇಕು ? ಒಳ್ಳೇ ಮಾತು ಇದು ಅಂತ ಹೇಳತಾ ಇದೇನೆ, ಕೇಳೋದಿಲ್ಲವಲ್ಲ ಅಂತೇನೆ. ನನ್ನ ಮಾತು ತಪ್ಪಲ್ಲ. 'ಆದರೆ ಪ್ರಯೋಜನ ಏನು ?' ಈ ಮಾತು ಹೇಳಿ ಕೊಂಚ ತಡೆದು

'ನಾನು ದೊಡ್ಡ ಗುರು ಅಂತ ಹೇಳತಾ ಇಲ್ಲ ಈ ಮಾತನ್ನು ; ಲೋಕದ ಗುರು ಅಲ್ಲ ನಾನು. ನನಗೆ ತೋರಿದ್ದುನಾನು ಹೇಳತಾ ಇದೇನೆ. ಗುರು ಅಂತ ಹೇಳಿಕೊಳ್ಳದೆ ಇದ್ದರೂ ನಾನು ಗುರು ಕೂಡಾ ಆಗಿದೇನೆ. ಯಾಕೆ ಅಂದರೆ ನಾನು ಹೇಳೊ ಮಾತು, ಎಲ್ಲರೂ ಕೇಳಬೇಕಾದ ಮಾತು, ನಾನು ಬರಿಯ ಉಪಕರಣ. I am the gramaphone speaker through which my elders speak "ನನ್ನ ಮೂಲಕ ನನ್ನ ಹಿರಿಯರು ಮಾತಾಡತಾ ಇದಾರೆ. ನಾನುಗ್ರಾಮಫೋನ್ ಸ್ಪೀಕರ್ ಇದ್ದ ಹಾಗೆ) ಈ ಮಾತು ಬಹುಪಾಲು ನನ್ನ ಸ್ವಂತದ್ದಲ್ಲ. ಸ್ವಂತ ಸ್ವಲ್ಪ ಇದೆ. ಅದು ಇರುವುದು ಸಮನ್ವಯದಲ್ಲಿ. ಆದರೆ ಮೊತ್ತ ಹಿರಿಯದು.' ಈ ಮಾತು ಹೇಳಿ ಸುಮ್ಮ ನಾದರು." ಕೊಂಚ ಹೊತ್ತು ಬಿಟ್ಟು ಅಲ್ಲಿಂದ ಹೊರಟೆವು. ಅವರು ಅಲ್ಲಿಂದ ಹೊರ ಬಾಗಿಲವರೆಗೆ ಬಂದರು. ಮೇಲಿನ ಮೆಟ್ಟಿಲಿನ ಮೇಲೆ ನಿಂತು ಮಾತಾಡುತ್ತಾ

ಬಾಗಿ ನಮಗೆ ಹೇಳಿದರು. "ಕ್ರಾಮ್‌ವೆಲ್ಲರ ಒಂದು ಉಕ್ತಿಯನ್ನು ಕೇಳಿದೀರಾ? I beseech you by the bowels of Christ, consider that you may be mistaken. (ನೀವು ಅಂದುಕೊಂಡಿರೋದು ತಪ್ಪಿರಬಹುದು ದಯವಿಟ್ಟು ಯೋಚಿಸಿರಿ ಅಂತ ಬೇಡಿಕೊಳ್ಳುತ್ತೇನೆ.)" ಜನರ ನಡುವೆ ವಿನಾಕಾರಣ ತಪ್ಪು ತಿಳಿವಳಿಕೆ ಬರುವುದನ್ನು ಕುರಿತಂತೆ ಆಗ ಮಾತು ಬಂದಿತಷ್ಟೆ. ಕ್ರಾಮ್‌ವೆಲ್‌ನ ಈ ಮಾತು ಮತ್ತೆ ನೆನಪು ಮಾಡಿಕೊಂಡೆ. ಹೌದೇ ಅನ್ನಿಸಿತು. ಹೊರಗೆ ಹೊರಟವನು ಗೇಟಿನ ಬಳಿ ನಿಂತು ತಿರುಗಿ ನೋಡಿದೆ. ಅವರು ನಿಂತು ಕೈಬೀಸುತ್ತಿದ್ದರು. ಅದೇ ನಗೆಮುಖದಲ್ಲಿ. ಅದು ಬೆಳಗಿನ ತಿರುಗಾಟದ ಹೊತ್ತು ಅವರಿಗೆ. ಇನ್ನು ಅವರು ತಮ್ಮ ಎಂದಿನ ದಿನಚರಿಗೆ ತೊಡಗುವರು. ಮನೆಗೆ ಹಿಂತಿರುಗುತ್ತಾ ಇರುವಂತೆ ಮತ್ತೆ ಅವರು ಕೊನೆಯಲ್ಲಿ ಹೇಳಿದ ಮಾತು ನೆನಪಿಗೆ ತಂದುಕೊಂಡೆ. ನಮ್ಮ ತಿಳಿವಳಿಕೆ ತಪ್ಪಿರುವುದು ನಮಗೆ ಗೊತ್ತಿಲ್ಲದೇ ಇರಬಹುದಲ್ಲವೇ ?

"…. ಪುಟ್ಟಪ್ಪನವರ ಪರಿಚಯವನ್ನು ಮಾಡಿಕೊಂಡೆನು. ಅವರ ಬರಹವನ್ನು ಓದಿ ನೋಡಿದೆನು. 'ಬೆಳ್ಳಿಯ ಹಬ್ಬದ ಕಬ್ಬದ ಬಳಿ'ಯನ್ನು ಬರೆದ, ಈಚೆಗೆ ಪುಟ್ಟಪ್ಪನವರ ಲೇಖನ ಕಲೆ ಬಹಳ ಮುಂದುವರಿದಿತ್ತು, ಬರಹ ತಕ್ಕಷ್ಟು ವಿಫುಲವಾಗಿತ್ತು. ಎಸ್. ಜಿ. ಶಾಸ್ತ್ರಿಯ ಪ್ರೇರಣೆಯಿಂದ ಆರಂಭವಾಗಿದ್ದ ನಮ್ಮ ಲೇಖಕ ಸಹಾಯ ನಿಧಿಯಿಂದ ಈ ತರುಣ ಕವಿಯ ಮೊದಲ ಪುಸ್ತಕವನ್ನು ಅಚ್ಚು ಮಾಡುವುದು ಬಲು ಚೆನ್ನವಾಗುತ್ತದೆ ಎಂದು ಆಗಲೆ ನನಗೆ ತೋರಿತು. ಈ ಸೂಚನೆ ಸಿದ್ದೇಶ್ವರಾನಂದರಿಗೆ ತುಂಬ ರುಚಿಸಿತು. ಪುಟ್ಟಪ್ಪನವರು "ಇನ್ನೂ ಸ್ವಲ್ಪ ತಡೆಯುವುದು ಒಳ್ಳೆಯದಲ್ಲವೇ' ಎಂದು ನನ್ನನ್ನು ಕೇಳಿದರು. ನಾನು 'ತಡೆಯುವುದರಲ್ಲಿ ತಪ್ಪಿಲ್ಲ, ಇನ್ನಷ್ಟು ಪದ್ಯ ಬರೆಯುತ್ತೀರಿ, ಬರಹದಲ್ಲಿ ಹೊಸ ಗುಣ ಕಾಣಬಹುದು. ಆದರೆ ಈಗ ಬರೆದು ಸಿದ್ಧವಾಗಿರುವ ಕವಿತೆಯೂ ಪ್ರಕಟಣೆಗೆ ಅರ್ಹವಾಗಿದೆ. ಮತ್ತೆ ಯೋಚನೆ ಮಾಡಿದರೆ, ಬಿಡಬಹುದು ಎಂದು ತೋರಬಹುದಾದ ಬರಹ ಇಲ್ಲಿ ಕಾಣುತ್ತಿಲ್ಲ ಎಂದೆನು. ಅದಕ್ಕೂ ಮೇಲೆ 'ಕವಿತೆ ಪ್ರಕಟಣೆಗೆ ಅರ್ಹ ಎಂದು ನನಗೆ ಕಾಣುತ್ತಿದೆ. ಹೀಗೇಕೆ ಹಿಂತೆಗೆಯುತ್ತೀರಿ ? ಎಂದೆನು. ಅವರು ಒಪ್ಪಿದರು. ನಾನು ಎಸ್. ಜಿ. ಶಾಸ್ತ್ರಿಗಳಿಗೆ ಈ ಏರ್ಪಾಡನ್ನು ತಿಳಿಸಿ ಪತ್ರ ಬರೆದನು. ಅವರ ಒಪ್ಪಿಗೆ ಬಂದಿತು. ಇತರ ಹಿರಿಯರಿಗೂ ಸಂಗತಿಯನ್ನು ತಿಳಿಸಿದೆನು. ಕವನ ಸಂಕಲವನ್ನು ಬೆಂಗಳೂರು ಪ್ರೆಸ್ಸಿನಲ್ಲಿ ಅಚ್ಚು ಮಾಡಿಸಿ ನಮ್ಮ ನಿಧಿಯ ಮೊದಲನೆಯ ಪ್ರಕಟಣೆಯಾಗಿ ಪ್ರಕಟಿಸಿದೆನು. ಅದೇ ಪುಟ್ಟಪ್ಪನವರ ಮೊದಲ ಕವನ ಸಂಗ್ರಹ 'ಕೊಳಲು'……………………"

ಮಾಸ್ತಿ ವೆಂಕಟೇಶ ಅಯ್ಯಂಗಾರ್

(ಭಾವ)

# ಡಾ|| ಮಾಸ್ತಿಯವರೊಡನೆ ಸಂದರ್ಶನ

ಹೆಚ್. ಎಸ್. ರಾಘವೇಂದ್ರರಾವ್

ಈ ವರ್ಷದ ಸ್ವಾತಂತ್ರ್ಯ ದಿನದಂದು ಮುಂಜಾನೆ ಹತ್ತೂವರೆ ಗಂಟೆಗೆ, ಜಿನುಗುವ ಮಳೆಯಲ್ಲಿ, ನಮ್ಮ ನಾಡು ನುಡಿಗಳ ಹಿರಿಯರಾದ ಮಾಸ್ತಿಯವರ ಮನೆಗೆ ಹೋದಾಗ ನನ್ನ ತಲೆಯ ತುಂಬ ಇದ್ದದ್ದು ಉಗ್ರಪ್ಪ, ಗೌತಮಿ, ಸಾರಿಪುತ್ರ, ವೆಂಕಟಿಗ, ಜೋಗ್ಯೋರ ಅಂಜಪ್ಪ...ಹೀಗೆಯೇ ಒಂದು ಲೋಕ. ಶ್ರೀನಿವಾಸರು ನಮಗೆ ಕೊಟ್ಟ ಲೋಕ. ನಮ್ಮದೇ ಲೋಕದಲ್ಲಿ ಅವರು ತೆಗೆದ ಭಾವಚಿತ್ರಗಳ ಸಂಕಲನ. ನನ್ನ ಮನಸ್ಸಿನ ಇನ್ನೊಂದು ಮೂಲೆಯಲ್ಲಿ ಇದ್ದದ್ದು ಮಾಸ್ತಿ ವೆಂಕಟೇಶ ಅಯ್ಯಂಗಾರ್ ಅವರು. ಹತ್ತು ವರ್ಷದ ಹುಡುಗಿಯನ್ನೂ "ತಾಯಿ" ಎಂದೇ ತಿಳಿಯುವ, ಕರೆಯುವ ಶುಚಿರುಚಿಯ ಸಾತ್ವಿಕರು. ನಮ್ಮ ಹಿರಿಯರು ಬದುಕಿದ್ದು, ಹೇಳಿದ್ದು ಎಂದು ಅವರು ನಂಬಿರುವ ಸಂಸ್ಕೃತಿಯ ಮುಖವಾಣಿ. ಈ ಕತೆಗಾರ ಮತ್ತು ಈ ಸಜ್ಜನ ಅಧಿಕಾರಿ ಇವರ ನಡುವಿನ ಸಂಬಂಧವನ್ನು, ವಿರೋಧವಿದ್ದರೆ ಅದನ್ನು ತಿಳಿಯಬೇಕೆನ್ನುವ ಆಸೆ ನನಗೆ. ಇವರು ಹಾಕುವ ಮಾತಿನ ಮೋಡಿಯ ಹಿಂದೆ ಅಡಗಿರುವ ವಿಚಾರದ ಬೇರುಗಳನ್ನು ಹುಡುಕುವ, ತಿಳಿಯುವ ಮತ್ತು ಮೆಚ್ಚುವ ಹಂಬಲ ನನ್ನದು. ಜಡವಾದ ಸಂಪ್ರದಾಯಕ್ಕೆ ಮಾನವೀಯತೆಯ ಸ್ಪರ್ಶ ಕೊಡುವ ಈ ಹೃದಯವಂತರು, ತಮ್ಮ ಬದುಕು ಬೀರುವ ಸುವಾಸನೆಗೆ ತಾವು ಬೆಳೆದು ಬಂದ, ನಂಬಿನಡೆದ ಸಂಸ್ಕೃತಿಯೇ ಕಾರಣ ಎನ್ನುತ್ತಾರೆ. ಆ ಸಂಸ್ಕೃತಿಗೆ ಅರ್ಥ ಬಂದರೆ ಇಂತಹ ಕೆಲವರ ಬದುಕಿನಿಂದ ಮಾತ್ರ ಎಂದು ನನ್ನ ನಂಬಿಕೆ.

ಹೇಗೇ ಇರಲಿ, ಈ ಸಂದರ್ಶನವನ್ನು 'ಓದುತ್ತಿರುವ' ನೀವು ಅಷ್ಟರ ಮಟ್ಟಿಗೆ ದುರದೃಷ್ಟವಂತರು; ಏಕೆಂದರೆ ಧ್ವನಿಯ ಆ ಮಾರ್ದವವನ್ನು, ಶಬ್ದಗಳಲ್ಲಿ ಭಾವನೆಗಳನ್ನು ತುಂಬುವ ಆ ಸೊಗಸನ್ನು ಈ ಕರಿಯ ಅಕ್ಷರಗಳಲ್ಲಿ ನಾನು ಕಾಣಿಸುವುದು ಹೇಗೆ ? ಭಾವನೆಗಳ ಬೆಳುದಿಂಗಳಲ್ಲಿ ಮಾತುಗಳಿಗೆ ವಿಚಾರಗಳಿಗೆ ಕಂಡೂ ಕಾಣದ ಶಕ್ತಿ ಬಂದಾಗ ನಮ್ಮೊಳಗಿನ ಪ್ರಶ್ನೆ ಕೇಳುವ ವ್ಯಕ್ತಿ ಸುಮ್ಮನಾಗುತ್ತಾನೆ. ಈ ತೊಂಬತ್ತರ ಯುವಕ, ಬದುಕನ್ನು, ಮೌಲ್ಯಗಳನ್ನು, ನಮ್ಮನ್ನು, ತನ್ನನ್ನು ಪ್ರೀತಿಸುವ ರೀತಿ "ಶತಂ ಜೀವೇಮ ಶರದಃ" ಎಂಬಂತಹ ಮಾತಿಗೆ ಅರ್ಥ ಕೊಡುತ್ತದೆ.

ಸರಿ, ನನಗೆ ಮತ್ತು ಶೂದ್ರ ಶ್ರೀನಿವಾಸರಿಗೆ ಹೋಗುತ್ತಿದ್ದಂತೆಯೇ ಇವರ ಆತ್ಮೀಯತೆಯ ವಲಯದೊಳಗೆ ಸ್ಥಳ ಸಿಕ್ಕಿತು. ಪಕ್ಕದಲ್ಲಿ ಕುಳಿತರು. ನನ್ನ

ಊರು ಕೆಲಸ, ತಾಯಿ, ತಂದೆ ಕೇಳಿ ತಿಳಿದುಕೊಂಡರು. 'ನಿಮ್ಮನ್ನು ನಾನು ಪ್ರಶ್ನೆ ಕೇಳುತ್ತಿಲ್ಲ. ಸುಮ್ಮನೆ ನಿಮ್ಮ ಅಭಿಪ್ರಾಯಗಳನ್ನು ತಿಳಿದುಕೊಳ್ಳುವ ಬಯಕೆ ನನ್ನದು.' ಎಂಬ ಮಾತಿಗೆ ತುಂಬುನಗೆಯ ಉತ್ತರ ಕೊಟ್ಟರು.

ನಾನು ಕೇಳಬೇಕೆಂದಿದ್ದ ಮೊದಲ ಪ್ರಶ್ನೆ ಕರ್ನಾಟಕದ ಏಕೀಕರಣದಿಂದ ಆಗಿರುವ ಲಾಭ ನಷ್ಟಗಳಿಗೆ ಸಂಬಂಧಪಟ್ಟದ್ದು. ಆದರಿಂದ ಹಳೆಯ ಮೈಸೂರಿನ ಜನರಿಗೆ ಅನ್ಯಾಯ ಆಯಿತೆಂಬ ಮಾತನ್ನು ಅವರೂ ಹೇಳುವರೇನೊ ಎಂಬ ಅನುಮಾನ ನನಗಿತ್ತು. ಆದರೆ ಅವರ ಮಾತುಗಳು ಹಳೆಯ ಮೈಸೂರಿನಲ್ಲೇ ಆಗುತ್ತಿದ್ದ ಅನ್ಯಾಯಗಳ ಕಡೆಗೆ ಹರಿದವು. ಅದಕ್ಕಿಂತ ಹೆಚ್ಚಾಗಿ ಒಂದು ಮನೆಯ ಅಣ್ಣ ತಮ್ಮಂದಿರ ನಡುವೆ ಮತ್ಸರ ಪೈಪೋಟಿ ಏಕೆ ಎನ್ನುವ ದೊಡ್ಡ ಮಾತನ್ನು ಆಡಿದರು. ಯಾರಿಗೂ ನೋವಾಗದಂತೆ, ಬೇಸರವಾಗದಂತೆ ಮಾತಾಡುವ ತಮ್ಮ ಶಕ್ತಿಯನ್ನು ತೋರಿಸಿದರು. ಅವರು ಹೀಗೆ ಹೇಳಿದರು:

"ಏಕೀಕರಣ ಎನ್ನುವುದು ಆಗಬೇಕು ಅಂತ ಮಾಡಿದ್ದು ಒಡನೆಯೇ ಏನಾದರೂ ಸುಖ ಸಾಧಿಸಿ ಬಿಡತೇವೆ ಅಂತ ಅಲ್ಲವಲ್ಲಾ ? ಕನ್ನಡದ ಜನ ಇಪ್ಪತ್ತು ಕಡೆ ಹಂಚಿಹೋಗಿ ಒಬ್ಬರ ಮನಸ್ಸು ಇನ್ನೊಬ್ಬರು ತಿಳಿದುಕೊಂಡು ನಡೆಯೋದು ಆಗದ ಹಾಗೆ ಆಗಿಬಿಟ್ಟಿದೆ, ರಾಜಕೀಯವಾಗಿ. ಕರ್ನಾಟಕದ ಸಂಸ್ಕೃತಿ ಅನ್ನೋದು ಯಾವುದು ಇದೆ, ಅದು ಮುಂದುವರಿಯೋಕೆ ದಾರಿ ಇಲ್ಲ. ಆ ಸಂಸ್ಕೃತಿ ಮುಂದು ವರೀಬೇಕಾದರೆ ಎಲ್ಲರೂ ಜೊತೆಯಾಗಿರಬೇಕು. ಯಾವುದು ಒಳ್ಳೆಯದು ಅಂತ ನಿಶ್ಚಯಿಸಿಕೊಂಡು ಅದೇ ದಾರೀಲಿ ನಡೀಬೇಕು ಅನ್ನೋದು ನಮ್ಮ ಚಪಲ. ಅದಕ್ಕಾಗಿ ನಾವು ಬಯಸಿದ್ದು, ಮಾಡಿದ್ದು. ಇಷ್ಟು ಬೇಗನೇ ಆಗುತ್ತೆಯೋ ಅಪ್ಪಾ ? ಮೂರು ಕೋಟಿ ಜನದ ಮನಸ್ಸು ಒಡನೇನೇ ಒಂದಾಗಿ ಬಿಡತ್ತೆಯೋ ? ಸಾವಕಾಶವಾಗಿ ಆಗುತ್ತೆ ಅದು ಇಪ್ಪತ್ತೈದು ವರ್ಷ ಏನು ಮಹಾ ಅಂತ ತಿಳುಕೊಂಡಿದೀರಿ, ಒಂದು ಜನಾಂಗದ ಜೀವಮಾನದ ಕಾಲದಲ್ಲಿ ? ಜನಾಂಗದ ಜೀವನ ಸಾವಿರ ವರ್ಷಗಳ ಲೆಕ್ಕದ್ದು. ಇಷ್ಟು ಜನದ ಮನಸ್ಸನ್ನು ತಿದ್ದ ಬೇಕಾದರೆ ಇಪ್ಪತ್ತೈದು ವರ್ಷ ಸಾಕೇ ? ನಾವು ಹೇಳಬೇಕು; ಅಪ್ಪ, ಕನ್ನಡ ದೇಶ ಅಂತ ದೊಡ್ಡದೇಶ ಇದೆ, ದೊಡ್ಡ ಸಂಸ್ಕೃತಿ ಇದೆ, ಅದರ ಮಕ್ಕಳು ನೀವು. ಅದನ್ನ ಮರೀಬೇಡಿ ನೀವು ಅಂತ ಹೇಳಿ, ಹೇಳಿ, ಹೇಳಿ....ಧಾರವಾಡದೋನು ಮೈಸೂರಿನವನನ್ನ ತನ್ನ ತಮ್ಮ, ಅಣ್ಣ ಅಂತ ಹೇಳೋ ರೀತಿ, ಮಂಗಳೂರಿನೋನಿಗೆ ಧಾರವಾಡದೋನು ತನ್ನ ತಮ್ಮ ಅಂತ ಹೇಳಿ, ಹೀಗೆ ಮೂರು ಕಡೆ ಜನವೂ, ತಾವು ಒಂದು ಅಂತ ತಿಳಿದು ಬೆರೆಯಬೇಕಾದರೆ ಎಷ್ಟು ದಿವಸದ ಪ್ರಶ್ನೆ ಅದು ? ಬೇಗನೆ ಆಗುತ್ತೆ ಅಂತ ನಾವು ಯಾರಾದರೂ ತಿಳಿದಿದ್ದವೆ ? ನಿರೀಕ್ಷಿಸಿದ್ದವೇ ? ನಾನು ನಿರೀಕ್ಷಿಸಲಿಲ್ಲ. ಆದರೆ ಒಂದಾಗಿ ಬಾಳೋದು ಅದು ಒಂದೇದಾರಿ. ಅದಕ್ಕೋಸ್ಕರ ಮಾಡಿದೆವು ನಾವು. ಮಾಡಿದ್ದು ಆಗಿದೆ, ಚೆನ್ನಾಗೇ ಆಗಿದೆ. ಈಗ ನೋಡಿ.

ಬೇಂದ್ರೇನೊ, ಕಾರಂತರೋ, ಒಬ್ಬ ಲೇಖಕನ್ನ ತೆಗೊಂಡರೆ ನೀವು, ಧಾರವಾಡದಲ್ಲಿ, ಮೈಸೂರಿನಲ್ಲಿ ಎಲ್ಲಾ ಕಡೆ ಒಪ್ಪಿಕೊಳ್ಳುತಿದಾರೆ. ಲೇಖಕನ್ನ ಒಪ್ಪಿಕೊಂಡರೆ ಅವರ ಪುಸ್ತಕಗಳನ್ನ ಒಪ್ಪಿಕೊಂಡ ಹಾಗೆ ಆಯ್ತು. ಒಪ್ಪಿಕೊಂಡಿದ್ದರ ಅರ್ಥ ಏನು ? ನಮ್ಮವನು, ಬೇಕಾದವನು ಅಂತ ಆಯ್ತಲ್ಲಾ, ಅದು ಮುಖ್ಯ. ಈ ನಮ್ಮವನು ಅನ್ನೋದು ಅಷ್ಟು ವಿಸ್ತಾರವಾದರೆ ಅಷ್ಟು ಒಳ್ಳೇದು."

ಈ ಹಂತದಲ್ಲಿ ನಾನು ಮಧ್ಯ ಪ್ರವೇಶ ಮಾಡಿದೆ : ಸಾಹಿತ್ಯದ ಮಟ್ಟಿಗೆ ಈ ಸ್ಥಿತಿ ಏಕೀಕರಣಕ್ಕಿಂತ ಮುಂಚೇನೂ ಇತ್ತು ಅಂತ ಕಾಣುತ್ತೆ."

ಅವರ ಪ್ರತಿಕ್ರಿಯೆ ಅದಕ್ಕಿಂತ ಭಿನ್ನವಾದ ಆದರೆ ಅಷ್ಟೇ ಸ್ವಾರಸ್ಯಕರವಾದ ದಾರಿಯಲ್ಲಿ ಮುಂದುವರಿಯಿತು.

"ಇಲ್ಲ, ಇಲ್ಲ, ಇರಲಿಲ್ಲ. ಇವತ್ತೂ ಪೂರ್ತಿ ಇಲ್ಲ. ಬರೀ ಇದರ ಮಾತೇ ಅಲ್ಲ, ಜಾತೀ ಕೂಡ ಬಿಟ್ಟಿಲ್ಲ, ನಮ್ಮ ಸಾಹಿತ್ಯದಲ್ಲಿ ಇನ್ನೂ... ನೋಡಿದಿರಾ ? ನಾ ಹೇಳತಿರೋದು ಏನೂಂದರೆ ಮನಸ್ಸುಗಳು ಕೂಡೋದು ಕಷ್ಟ ಅಂತ, ಹಿಂದೂ ಇಲ್ಲ, ಇಂದೂ ಇಲ್ಲ. ಇಪ್ಪತ್ತೈದು ವರ್ಷದಲ್ಲಿ ಆಗಲಿಲ್ಲ ಅಂತ ನಾನು ಬೇಸರ ಪಡೋದಿಲ್ಲ ಮುಂದಕ್ಕೆ ಆಗತ್ತೆ ಅಂತ ಆಸೆ ಇಟ್ಟುಕೊಂಡು ನಡೀತಾ ಇದ್ದೇನೆ."

ನಾನು : ಸಾಧನೆ ಆಗಿರೋ ಪ್ರಮಾಣದ ಬಗ್ಗೆ ನಾನು ಪ್ರಶ್ನೆ ಕೇಳ್ತಾ ಇಲ್ಲ, ಆದರೆ ದಿಕ್ಕು ಸರಿಯಾಗಿದೆ ಅಂತೀರಾ ?

ಉತ್ತರ ತಕ್ಷಣ ಬಂತು.

"ಓಹೋ ಆಗಿದೆ. ಆಗದೆ ಏನು ? ಬಿಜಾಪುರದ ಜನ ಮೈಸೂರವರನ್ನ ಬೇರೆ ಅಂತ ಅನ್ನೋದಿಲ್ಲ, ಒಪ್ಪಿಕೊಂಡಿದಾರಲ್ಲ. ಅಲ್ವೇ ?"

ಮಾಸ್ತಿಯವರ ಹಾಗೆಯೇ ನೇರವಾದ, ಸರಳವಾದ ಈ ಮಾತನ್ನು ಒಪ್ಪಿಕೊಂಡು ಮುಂದುವರಿದೆ. ಅಧಿಕಾರದಲ್ಲಿದ್ದು ಆಡಳಿತದ ಅನುಭವ ಪಡೆದ ಅವರಿಗೆ ಏಕೀಕರಣದ ನಂತರ ಹಳೆಯ ಮೈಸೂರಿಗೆ ಆರ್ಥಿಕವಾಗಿ ಅನ್ಯಾಯವಾಗುತ್ತಿದೆ ಎನಿಸುತ್ತದೆಯೋ ಎಂದು ಇನ್ನೊಮ್ಮೆ ಕೇಳಿದೆ. ಈಗ ಅವರ ಉತ್ತರ ಸಮಸ್ಯೆಯ ಕೇಂದ್ರದ ಕಡೆಗೆ ಚಲಿಸಿತು.

"ಸ್ವಾಮಿ ಹಳೇ ಮೈಸೂರಿನಲ್ಲೇ ಆಗತಾ ಇತ್ತು, ಅನ್ಯಾಯ. ಅನ್ಯಾಯ ಇಲ್ಲದ ಹಾಗೆ ಯಾವ ಲೋಕ ಇದೆ ? ಈ ಮಾತು ಎಂದೋ ಹೇಳಿದೆ ನಾನು. ಹೇಳಿದರು... 'ಓ, ಕರ್ನಾಟಕ ಅಂತ ಆಗಿ ಬಿಟ್ಟರೆ ವೀರಶೈವರು ಪ್ರಬಲರಾಗಿ ಬಿಡತಾರೆ' ಹಾಗೇಂತ, ನಾನು ಕೇಳಿದೆ. ವೀರಶೈವರು ಪ್ರಬಲರಾಗೋದು ಬಹಳ ಕೆಟ್ಟದ್ದು ಅಂತಾದರೆ ಇವತ್ತು ಒಕ್ಕಲಿಗರು ಪ್ರಬಲರಾಗಿದೀರಲ್ಲ ಅದು ಕೆಟ್ಟದಲ್ಲವೆ ? ಗುಂಪುಪ್ರಾಬಲ್ಯ ಅಂತ ಇರೋದು ಕೆಟ್ಟದೂ ಅನ್ನೋದಾದರೆ ಯಾವ ಗುಂಪಿನ ಪ್ರಾಬಲ್ಯ ಇದ್ದರೂ ಕೆಟ್ಟದೇ. ಏನು ಮಾಡಿದ ಹಾಗಾಯಿತು ? ಅವನೂ ನಿಮ್ಮವನೆ, ಪ್ರಬಲವಾಗಲಿ ಬೇಕಾದವನು, ನನ್ನ ಅಣ್ಣ ಅವನು, ನನ್ನ ತಮ್ಮ

ಅವನು ಅನ್ನೋದಲ್ವೇ ಬದುಕೋ ದಾರಿ ? ವಿರೋಧ ಅಂತ ಹಿಂದೂ ಮುಸ್ಲಿಮ್ ಪಾಡು ನೋಡಿ, ಪಾಕಿಸ್ತಾನ ಆಗಿಹೋಯಿತು. ಮೈಸೂರಿನಲ್ಲೇನೆ ಮಾತುಬಂತು. ಕೋಲಾರ ಜಿಲ್ಲೆಯವರು, ಬಂಗಾರ ನಮ್ಮದು, ದೇಶದ ಇತರ ಪ್ರಜೆಗಳೆಲ್ಲಾ ಅನುಭವಿಸ್ತಾ ಇದ್ದಾರೆ ಅಂತ. ಯಾಕೆ ಕೊಡದು ಅಂತ. ಒಂದು ಮನೆ, ಒಬ್ಬ ಅಣ್ಣ ಐ.ಸಿ.ಎಸ್. ಆಗಿರ್ತ್ತಾನೆ; ಇನ್ನೊಬ್ಬ ಲಾಯರ್ ಆಗಿರತಾನೆ; ಮತ್ತೊಬ್ಬ ಅಂಗಡಿ ಇಟ್ಟಿರತಾನೆ. ತಾಯಿತಂದೆ ಇರತಾರೆ. ಊಟಕ್ಕೆ ಕೂತಿರತಾರೆ. ಏನು ಐ.ಸಿ.ಎಸ್. ಮಗನಿಗೆ ತುಪ್ಪ ಹೆಚ್ಚಾಗಿ ಹಾಕ್ತಾರೆಯೇ ? ಅಂಗಡಿಯವನಿಗೆ ಕಡಿಮೆ ಹಾಕ್ತಾರೆಯೇ ? ಏನು ಮಾಡತಾರೆ ಒಂದು ಮನೆಯೊಳಗೆ ಅಪ್ಪಾ ? ಅವನು ಸಂಪಾದಿಸಿದ್ದನ್ನ ಇವನು ತಿನ್ತಾ ಇಲ್ಲವೆ? ತಿಂದರೆ ಏನು ತಪ್ಪು? ಯಾರು ತಿಂದ್ರು ? ನಿನ್ನ ಶತ್ರು ತಿಂದನೇ ? ನೋಡಿ. ಸ್ವಾರ್ಥ ಅನ್ನೋದನ್ನ ನೀವು ಎಷ್ಟೆಷ್ಟು ಭದ್ರ ಮಾಡ್ಕೋತೀರೋ ಅಷ್ಟಷ್ಟು ಕೆಡಕಾಗುತ್ತೆ. ಹೃದಯಾನ ಎಷ್ಟು ವಿಸ್ತಾರ ಮಾಡಿ ಕೋತೀರೋ ಅಷ್ಟು ಒಳ್ಳೇದಾಗತ್ತೆ, ಒಂದು ಗುರಿ ಮನುಷ್ಯ ಜಾತಿಗೆ, ಪಂಪ ಎಂದೋ ಹೇಳಿಬಿಟ್ಟ : ಮನುಜ ಕುಲಂ ಒಂದೆ ವಲಂ ಅಂತ"

ಇಲ್ಲಿಂದ ಮುಂದೆ ಅವರ ಮಾತಿನ ವ್ಯಾಪ್ತಿ ಹಿಗ್ಗಿತು. ವಿಶ್ವದಲ್ಲಿ ತುಂಬಿರುವ ಅಪಾಯದ ಸನ್ನಿವೇಶದಲ್ಲಿ ವಿವೇಕದ ದಾರಿ ಯಾವುದೆನ್ನುವುದನ್ನು ಅವರು ತುಂಬಾ ಚೆನ್ನಾಗಿ ವಿವರಿಸತೊಡಗಿದರು. ಆ ಭಾಗವನ್ನು ಈ ಸಂದರ್ಶನದಲ್ಲಿ ಸೇರಿಸದೆ ಇರಲು ನನಗೆ ಸಾಧ್ಯವಿಲ್ಲ.

"ಪಂಪ, ದೊಡ್ಡ ಕವಿ ಅವನು, ಅವನು ಹೇಳಿದ, ಇದನ್ನ. ಇವತ್ತು ನಾವು ಯಾಕೆ ಮರೀತಿದೇವೆ ? ಮರೆಯೋದು ತಪ್ಪಲ್ಲವೊ ? ಹಾಗಾದರೆ ಒಂದೆ ವಲಂ ಅಂದಮೇಲೆ ಎಲ್ಲವನ್ನೂ ತೆಗೆದುಬಿಟ್ಟು ಸಮಾನವಾಗಿ ಹಂಚಿ ಬಿಡಿ ಅಂತಲೋ ? ಇವತ್ತು ಮಾಡಿತೋ, ಅದು ನಾಳೆ ನಿಲ್ಲೋದಿಲ್ಲ. ಭಾನುವಾರ ಹಂಚತೀರಿ ನೀವು. ಸೋಮವಾರ ಇರೋದಿಲ್ಲ ಅದು. ಈಗ ಒಂದು ಸ್ಥಿತಿಯನ್ನು ತಂದಿರಿ. ಒಂದು ನೂರು ವರ್ಷ ಆಗತ್ತೆ, ಖಂಡಿತಾ ಈ ಸ್ಥಿತಿಯನ್ನು ಹಿಂದಕ್ಕೆ ತರುತ್ತೆ. ಮನುಷ್ಯನ ಇವತ್ತಿರೋ ರೀತಿ ಒಳಗೆ ಇದು ಯಾವುದೂ ತಪ್ಪಿದ್ದಲ್ಲಾ. 'ಪ್ರಾಪರ್ಟಿ' ತಪ್ಪು ಅಂತ ನಮ್ಮ ಹಿರಿಯರು ಎಂದೋ ಹೇಳಿದರು. ಈ ಐಶ್ವರ್ಯ ತಪ್ಪು ಅಂತ ವೇದದಲ್ಲಿ ಹೇಳಿದ್ದಾರೆ. ಋಗ್ವೇದದಲ್ಲಿ, ಉಳ್ಳವನು ಇಲ್ಲದವನಿಗೆ ಕೊಡಬೇಕು ಅಂತ ವೇದದಲ್ಲಿ ಹೇಳಿದ್ದಾರೆ. ಯಾವಾಗ? ಐದು ಸಾವಿರ, ಆರು ಸಾವಿರ ವರ್ಷಗಳ ಹಿಂದೆ ಹೇಳಿದ ಮಾತು .... ಏನು ಪ್ರಯೋಜನಾ ರಾಘವೇಂದ್ರರಾವ್ ?.... ಮನುಷ್ಯನಿಗೆ ಧ್ಯೇಯ ತಿಳೀದೇ ಹೋಗಲಿಲ್ಲ. ಆದರೆ ಆಚರಣೆಗೆ ಬರಲಿಲ್ಲ. ದುಡುಕಬಾರದು. ಹೇಳತಾ ಇರಬೇಕು. ಮಗನಿಗೆ ಮೊದಲು ಮಾತು ಬರಲಿಲ್ಲ ಅಂತ ಬಿಡೋಕಾಗೋದಿಲ್ಲ. ನಾನು ತಿಳುಕೋಬೇಕು, ಇತರರಿಗೆ ಹೇಳಬೇಕು. ಹೇಳಬೇಕಾದರೆ ನಾನು ಅದರಂತೆ ನಡೀಬೇಕು. ಮನುಷ್ಯ ಜಾತಿಗೆ ಇದೊಂದೇ ದಾರಿ

ಇರೋದು. ಇವತ್ತು ನಮ್ಮನ್ನು ಹೆದರಿಸತಾ ಇದೆಯಲ್ಲ. ಈ ಆಟಂಬಾಂಬ್‌ನ ಭಯಕ್ಕೆ ಕೂಡ ನಿವಾರಣೆ ಅದೇನೆ. ಏನೂಂತ ? 'ಎಲೋ, ಆಟಂಬಾಂಬ್ ಹಾಕಿದರೆ ನೀನೂ ಇಲ್ಲ, ನಾನೂ ಇಲ್ಲ. ಅದನ್ನ ಹೊರಗಿಡು ಅಂತ. ತೆಗೆದು ಹೊರಗಿಡೋಕೆ ಅವರ ಒಪ್ಪಿಗೆ ಯಾವಾಗ ಬರುತ್ತೆ ? ನಮ್ಮ ಭಯ ಅವನ ಮನಸ್ಸಿಗೆ ಮುಟ್ಟಬೇಕು. ಮತ್ತೇನು ಮಾಡತೀರಿ ? ಒಬ್ಬೊಬ್ಬ ಮನುಷ್ಯ ಒಂದೊಂದು ಸ್ಥಿತೀಲಿ ಇದಾನೆ. ಇವತ್ತಿನ ದಿವಸ ಅವರ ಮನೋಧರ್ಮ ಒಂದೊಂದು ವಿಧ. ಒಬ್ಬನ ಮನೋಧರ್ಮ ಸರಿಯಿಲ್ಲ. ಅದನ್ನ ಸರಿಮಾಡ ಬೇಕು. ಹ್ಯಾಗೆ ? ಮಾತಾಡಬೇಕು, ಬೇಡಬೇಕು. ಬೇಕಾದರೆ ಕಾಲಿಗೆ ಬೀಳ ಬೇಕು. ಅಲ್ಲವೆ ?......ಹುಚ್ಚಿ...ಬಾವಿಕಟ್ಟೆಯ ಮೇಲೆ ಕೂತುಬಿಟ್ಟಿದಾಳೆ, ನೀವು ಹೆಚ್ಚು ಗಟ್ಟಿಯಾಗಿ ಮಾತಾಡಿದರೆ ಬಿದ್ದು ಬಿಡುತೇನೆ ಅಂತ ಹೆದರಿಸುತಾ ಇದ್ದಾಳೆ. ದಾರಿ ಹ್ಯಾಗೆ ಆಯ್ತಾ? ಹತ್ತಿರ ಹೋದರಿ ಬೀಳತೇನೆ ಅಂತಾಳೆ. ದೂರದಿಂದಲೇ, 'ಅಮ್ಮಾ ಹೀಗೆ ಮಾಡಬೇಡ ತಾಯಿ, ಬಾರೇ, ಬಾಮ್ಮಾ' ಅಂತ ಹೇಳಿ ಆ ಬಾವೀ ಅಂಚಿಂದ ಹೊರಗೆ ತರಬೇಕು. ಬೇರೆ ದಾರಿ ಯಾವುದು ಇದೇಂತ ನಾನು ಕೇಳತಾ ಇದೇನೆ. ಈ ಸಮಾಧಾನದ ಬುದ್ಧಿ ಇಲ್ಲದೆ ಚರ್ಚೆ ಇಲ್ಲದೆ, ತಪ್ಪುತಿಳಿದುಬಿಟ್ಟು, ನಮ್ಮದೇ ಮಾತು ಅಂತ ಯಾರು ಮಾಡಿದರೂ ತಪ್ಪಾಗತ್ತೆ. ಎದುರಾಳಿ ಮನಸ್ಸೇನು ಅಂತ ತಿಳಕೊಳ್ಳೋದು, ಸಾಧ್ಯವಾದರೆ ತಿದ್ದೋದು. ಇಬ್ಬರೂ ಸಾವಧಾನವಾಗಿ ಜೊತೆಯಾಗಿ 'ಸಹನಾವವತು, ಸಹನೌ ಭುನಕ್ತು, ಸಹವೀರ್ಯಂ ಕರವಾವಹೈ, ಮಾ ವಿದ್ವಿಷಾವಹೈ,' ಅಂತ. ಕೊನೆ ಮಾತು ಮುಖ್ಯ, ದ್ವೇಷ ಬೇಡ. ಯಾತಕ್ಕೆ, ಅಂತ. ಅಭಿಪ್ರಾಯ ಭೇದ ಕಾರಣದಿಂದ ದ್ವೇಷ ಬೇಡ ಅಂತ."

ಹೀಗೆ ನಾನು ಕೇಳಿದ ಪ್ರಶ್ನೆಗೆ ತುಂಬಾ ವಿಶಾಲವಾದ, ಮಾನವೀಯವಾದ ಉತ್ತರ ದೊರೆಯಿತು. ನನ್ನ ಮುಂದಿನ ಪ್ರಶ್ನೆ ಗಾಂಧೀಜಿಯವರ ತತ್ತ್ವಗಳಿಗೆ ಅವರು ಪ್ರತಿಕ್ರಿಯೆ ತೋರಿಸುವ ಬಗೆಯನ್ನು ಕುರಿತದ್ದು. ವ್ಯಕ್ತಿಯಾಗಿ, ನಮ್ಮ ಸಂಸ್ಕೃತಿಯ ಕೆಲವು ಉತ್ತಮ ಮೌಲ್ಯಗಳಿಗೆ ಪ್ರತಿನಿಧಿಯಾಗಿ ಗಾಂಧೀಜಿಯವರ ಬಗ್ಗೆ ಮಾಸ್ತಿಯವರಿಗೆ ಅಪಾರಗೌರವವಿದ್ದರೂ ಅಹಿಂಸೆಯಂತಹ ಕೆಲವು ತತ್ತ್ವಗಳ ಬಗ್ಗೆ ಅಭಿಪ್ರಾಯ ಭೇದವಿರಬಹುದೆಂದು ನನಗನ್ನಿಸಿತ್ತು. ಮಾಸ್ತಿಯವರ ದೀರ್ಘ ಉತ್ತರ ನಮ್ಮ ಬದುಕಿನ ಹಾಗೂ ಅವರ ವಿಚಾರಗಳ ಅನೇಕ ಕ್ಷೇತ್ರಗಳನ್ನು ಪ್ರವೇಶಿಸಿತು. ಕೊನೆಗೆ ತಮ್ಮ ಭಿನ್ನಮತವನ್ನು ಸ್ಪಷ್ಟವಾಗಿ ನಿರೂಪಿಸಿಯೂ ಕೂಡ ಗಾಂಧೀಜಿಯವರ ಬಗ್ಗೆ ಸಲ್ಲದ ಮಾತುಗಳನ್ನಾಡದಿರುವುದರಲ್ಲಿ ಮಾಸ್ತಿ ಯಶಸ್ವಿಯಾದರು. ಉದ್ಯಮೀಕರಣದ ಬಗ್ಗೆ ಗಾಂಧೀಜಿಯವರಿಗೆ ಸಂಪೂರ್ಣ ಬೆಂಬಲ ನೀಡಿದ ಅವರು ಅಹಿಂಸೆಯನ್ನು ಕುರಿತಂತೆ ನಮ್ಮ ಹಿರಿಯರ ಉಪದೇಶವೇ ತಮಗೂ ಸಮ್ಮತವೆಂದರು ಚರ್ಚೆಯು ಲೋಲಕ ಅನೇಕಬಾರಿ ಈ ಕೇಂದ್ರದಿಂದ ವಿಮುಖವಾಗಿ ಹತ್ತು ಹಲವು ಉಪಯುಕ್ತದಿಕ್ಕುಗಳಲ್ಲಿ ಚಲಿಸಿತು.

ನನ್ನ ಪ್ರಶ್ನೆ ಹೀಗಿತ್ತು :

"ಸಾರ್. ನಮ್ಮ ದೇಶ ಯಾವದಾರೀಲಿ ನಡೆಯಬೇಕು ಅನ್ನೋದರ ಬಗ್ಗೆ ಗಾಂಧೀಜಿಯುವರು ಕೆಲವು ತತ್ತ್ವಗಳನ್ನು ಹೇಳಿದರು. ಅವನ್ನ ಬಹುಮಟ್ಟಿಗೆ ಆಚರಣೆಯ ಹಂತದಲ್ಲಿ ನಾವು ಒಪ್ಪಿಕೊಂಡಿಲ್ಲ...."

ಮಾಸ್ತಿಯವರು : ಯಾವುದನ್ನ ?

ನಾನು : ಉದಾಹರಣೆಗೆ ಉದ್ಯಮೀಕರಣ ಬೇಡ ಎಂದು ಹೇಳಿದರು.

ಮಾಸ್ತಿಯವರು : ಇಲ್ಲವಲ್ಲ, ಅವರು ಹೇಳಲಿಲ್ಲವಲ್ಲಾ ಹಾಗೇ ಅಂತ. ಅವರು ಹೇಳಿದರು. ಕೈಗಾರಿಕೆ ಇರಬಹುದು. ಆದರೆ ಕೆಲಸಮಾಡೋ ಮನುಷ್ಯನಿಗೆ ಹೊಟ್ಟೆಗಿಲ್ಲದ ಹಾಗೆ ಮಾಡಬೇಡಾಂತ. ಅಷ್ಟೇ. ನೀನು ಬೇಗನೆ ಬಟ್ಟೆಮಾಡತೇನೆ ಅಂತ ಹೇಳಿಬಿಟ್ಟು, ಮಾಡಿಸಿಬಿಟ್ಟರೆ, ಅಲ್ಲಿ ಅರಳೇಪೇಟೇಲಿ ಸಾವಿರ ಜನಕ್ಕೆ ಬದುಕಿಲ್ಲದ ಹಾಗೆ ಮಾಡಿದರೆ ತಪ್ಪಾಗುತ್ತೆ ಅಂದರು. ದೊಡ್ಡ ಮಾತು.

ನಮ್ಮ ಮಾತು ಏನು ? 'ಬಿನ್ನಿಮಿಲ್ ಇತ್ತೇ, ಇಷ್ಟು ಜನ ಸೇರಿ ಒಂದು ವರ್ಷದಲ್ಲಿ ಮಾಡ್ತೋ ಬಟ್ಟೇನ ಒಂದು ತಿಂಗಳಲ್ಲಿ ಮಾಡತೇವೆ ನಾವು. ಇಷ್ಟು ಜನ ಬರೀ ಪ್ಯೆಯ್ಯಲ್ಲಿ ನಿಂತುಕೊಂಡು ಕಷ್ಟಪಡತಾ ಇದಾರಲ್ಲಾ ಅದನ್ನ ತಪ್ಪಿಸತೇವೆ ನಾವು.' ಗಾಂಧೀಜಿ ಹೇಳತಾರೆ : 'ಅಗತ್ಯವಾಗಿ ಮಾಡು. ಆದರೆ ಇವನಿಗೆ ಹೊಟ್ಟೆಗಿಲ್ಲದ ಹಾಗೆ ಮಾಡಬೇಡ.' Gandhiji's anti-industrial policy was merely meant to prevent unemployment. Engage this man. Give him food. Industrialisation at the expense of the common-man's need is dangerous. ಮತ್ತೇನೂ ಹೇಳಲಿಲ್ಲಾ ಅವರು....

ನಾನು : ಹಾಗಾದ್ರೆ Time saving means of production ಆವಶ್ಯಕತೆ ಇಲ್ಲಾಂತ....

ಮಾಸ್ತಿಯವರು : ಇಲ್ಲವಲ್ಲಾ, 'ಹಾಗೆ ಹೇಳಲಿಲ್ಲಾ ಅವರು, ಮಾಡಿ ಹಂಚಿ. ಯಾರು ಬೇಡಾಂದರು ? But see how you are going to save this man. Produce, but dont deprive this man of his means of liveli hood.

ಬರವಣಿಗೆ, ಅಚ್ಚು ಮಾಡಿ ಬಿಡತೀರಿ ನೀವು. ಹಿಂದೆ ಜನ ಅನೇಕ ಪುಸ್ತಕಗಳ ಹಸ್ತಪ್ರತಿಗಳನ್ನ ಬರೀತಾ ಇದ್ದರು. ಕಾಸು ಸಂಪಾದಿಸತಾ ಇದ್ದರು. ಇವತ್ತು ಅವರಿಗೆ ಕೆಲಸ ಇಲ್ಲದ ಹಾಗಾಗಿ ಹೋಯಿತು. ಕೊಡಿ, ಅವರಿಗೆ ಬೇರೆ ಕೆಲಸ. ಕೊಡಿ. ಸರಿ ಅಲ್ಲವೇ, ದಿಟ ಅಲ್ಲವೇ, ಅದು ?

ಈ ಸಂದರ್ಭದಲ್ಲಿ ಶೂದ್ರಶ್ರೀನಿವಾಸ ಅವರು ಮ್ಯಾಂಚೆಸ್ಟರ್ ಬಟ್ಟೆ ಗಿರಣಿ ಕಾರ್ಮಿಕರ ವಾದಕ್ಕೆ ಉತ್ತರವಾಗಿ ಗಾಂಧೀಜಿಯವರು ಹೇಳಿದ ಕೆಲವು

ಮಾತುಗಳನ್ನು, ಮಾಸ್ತಿಯವರ ವಾದಕ್ಕೆ ಸಮರ್ಥನೆಯಾಗಿ ಉದ್ಧರಿಸಿದರು. ಆ ಸಂದರ್ಭದ ನಿಕಟ ಪರಿಚಯವಿದ್ದ ಮಾಸ್ತಿಯವರು ಅದೇ ಧಾಟಿಯಲ್ಲಿ ಮಾತು ಮುಂದುವರಿಸಿದರು.

"ಅಷ್ಟೇ ಅಲ್ಲ ಅವರು ಹೇಳಿದ್ದು. ಅವರು ಹೇಳಿದರು : You Know what you are suffering from. You do not know the sufferings of our people"

ಇಲ್ಲಿಂದ ಮುಂದೆ ಅವರ ವಿಚಾರಧಾರೆಯು ಸ್ಪಷ್ಟವಾಗಿ ಮತ್ತೊಂದು ದಾರಿ ಹಿಡಿಯುವುದನ್ನು ಗುರುತಿಸಬಹುದು.

"I revere Gandhiji, I assure you. Of course in some points, I don't accept him : his teaching, I mean. I did not and I dont to day. ಗಾಂಧೀಜೀ ಥಿಯರೀನಲ್ಲಿ suffer the other man ಅಂತ ಹೇಳಿದರಲ್ಲಾ I dont accept it"

ನಾನು : ಸಾರ್, ಸತ್ಯಾಗ್ರಹ ಅಂದರೂ ಕೂಡ, ಸತ್ಯಕ್ಕಾಗಿ ಹೋರಾಟ ಅಂತಲೇ ಅರ್ಥ ಅಲ್ಲವೇ ?

ಮಾಸ್ತಿಯವರು : ಹೌದಪ್ಪಾ. ಆದರೆ ಯಾಕೆ ? ಜನಕ್ಕೆ ಕಷ್ಟ ತಪ್ಪಿಸಿದಿರೇನು ನೀವು ?

ಜನಕ್ಕೆ ಕಷ್ಟ ತಪ್ಪಿಸಿದಿರಾ ಅಂತ ಕೇಳತಾ ಇದೇನೆ. ಇವರು ಹೋಗಿ ಬಿಟ್ಟು 'ಸತ್ಯಾಗ್ರಹ ಮಾಡ್ರೋ ಕಂದಾಯ ಕೊಡಬ್ಯಾಡ್ರೊ' ಅಂತ. ಅಂದರು ಸರಿ, ರೈತರೆಲ್ಲಾ ಹಾಗೇ ಮಾಡಿದರು. ಸರಕಾರ ಹೋಯ್ತು. ಜಮೀನೆಲ್ಲಾ ಕಿತ್ತು ಕೊಂಡು ಬಿಡತು. ಹರಾಜು ಮಾಡಿತು, ಮಾರಿತು. ಯಾರು ಯಾರೋ ತೊಗೊಂಡು ಹೋಗಿ ಬಿಟ್ಟರು. ಸ್ವಾತಂತ್ರ್ಯ ಬಂತು. ನಮ್ಮ ಸರಕಾರ ಬಂತು. ರೈತರಿಗೆ ನೆಲ ಮನೆ ಹಿಂದಿರುಗಿಸಿ ಕೊಟ್ಟರೇ ? ಅವರ ಮನೆ ಹಾಳಾಗಲಿಲ್ಲವೇ ? ಅವರ ಮಕ್ಕಳು ಹಸಿವಿನಿಂದ ಸಾಯಲಿಲ್ಲವೇ ? ಏನು ತಪ್ಪಿಸಿದಿರಿ ಕಷ್ಟಾನ ನೀವು ? ಅವನು ತುಪಾಕಿ ಯಿಂದ ಹೊಡೆದು ಕೊಲ್ಲತಾ ಇದ್ದ. ನೀವು ಹಸಿವಿನಿಂದ ಸಾವಿರ ಜನಾನ ಕೊಂದುಬಿಟ್ಟರಿ.

ನನಗೆ, ನಮ್ಮ ಹಿರಿಯರು ಹೇಳಿರೋ ತತ್ವವೇ ಒಪ್ಪಿಗೆ. ಯುದ್ಧಸ್ವವಿಗತ ಜ್ವರಃ ನನಗೆ ನಿನ್ನ ಮೇಲೆ ಕೋಪ ಇಲ್ಲ. ನೀನು ಸಾಯಬೇಕು ಅಂತ ಹೇಳೋದಿಲ್ಲ ನಾನು. ಆದರೆ ನಿನ್ನೊಂದಿಗೆ ಕಾದುತ್ತೇನೆ ನಾನು. ನನ್ನ ಮಗೂನ ಹೊಡೆಯೋಕೆ ಬರತೀಯಾ ? ನಿನ್ನ ಕೈ ಹಿಡಿತೇನೆ. ಶಕ್ತಿಯಿದ್ದರೆ ತಡೀತೇನೆ. ಇಲ್ಲಾ. ಕೊಲ್ಲು. ನನ್ನನ್ನೂ ಕೊಲ್ಲು. ಅದನ್ನೂ ಕೊಲ್ಲು. I would not allow you to hit my child when I can prevent it.

ನಾನು : ಹಾಗಾದರೆ ಪ್ರಪಂಚದಲ್ಲಿ ಹಿಂಸೇನೆ ಹೆಚ್ಚು Prevalent ಆಗಿ ರೋದು ಸಹಜ ಅಂತ ನೀವು ಒಪ್ಪುತೀರಾ ?

ಮಾಸ್ತಿಯವರು : "ಹಿಂಸೆ ತಪ್ಪಿದಲ್ಲಾ ಸ್ವಾಮಿ. ಮನುಷ್ಯ ಜಾತಿ ಇರೋ ರೀತಿ ಒಳಗೆ ಹಿಂಸೆ ತಪ್ಪಿದ್ದಲ್ಲಾ. ಮಗೂ ಹುಟ್ಟೋದಿಲ್ಲಾ ಹಿಂಸೆ ಇಲ್ಲದೆ. A Child is not born without ಹಿಂಸೆ to somebody. ಹಿಂಸೆ ಹ್ಯಾಗೆ ತಪ್ಪುತ್ತೆ ಈ ಲೋಕದಲ್ಲಿ ?"

ನಾನು : ಆದಕ್ಕೇ ನಾನು ಹೇಳ್ತಾ ಇರೋದು, ಅಹಿಂಸೆಯಾಗಲಿ ಸತ್ಯಾಗ್ರಹದ ಕಲ್ಪನೆಯಾಗಲಿ ಮನುಷ್ಯನ ಸ್ವಭಾವಾನ ಸಂಪೂರ್ಣವಾಗಿ ತಿಳ್ಕೊಳ್ದೇ ಮಾಡಿದ್ದೇ ?

ಮಾಸ್ತಿಯವರು : ಉಂಟೇ, ಗಾಂಧೀಯವರ ಬಗ್ಗೆ ಆ ಮಾತು ಹೇಳಬೇಡಿ ನೀವು. ಅವರು ಏನು ಹೇಳಿದರೊಂದರೆ ಮನುಷ್ಯನ ಸ್ವಭಾವಾ ತಿದ್ದುತ್ತೆ ಅಂದರು. ಅವನಿಗೆ ಕನಿಕರ ಹುಟ್ಟುತ್ತೆ ಅಂದರು. Because there is God inside him.

ನಾನು : ಅದೇ ಹೃದಯ ಪರಿವರ್ತನೆ ಮಾತು...

ಮಾಸ್ತಿಯವರು : "ಹೌದು...ಒಂದು ಸಾತ್ವಿಕ ವಿಶ್ವಾಸ ಅದು. ಸಾತ್ವಿಕ ಮನಸ್ಸಿನ ವಿಶ್ವಾಸ ಅದು ನಾನು ಒಂದು ಪದ್ಯ ಬರೆದಿದೇನೆ ಓದಿದೀರಾ ? ಸಾತ್ವಿಕ ಅಂತ..."

ಈ ಸಂದರ್ಭದಲ್ಲಿ ಮಾಸ್ತಿಯವರು ತಮ್ಮ 'ಚೆಲುವು' ಪುಸ್ತಕವನ್ನು ತರಿಸಿ ಅದರಲ್ಲಿರುವ ಸಾತ್ವಿಕ ಎನ್ನುವ ಪದ್ಯವನ್ನು ಓದಿಸಿದರು. ಸಾತ್ವಿಕನ ಒಳ್ಳೆಯತನ ದಿಂದ ಕೆಟ್ಟವನ ಹೃದಯ ಪರಿವರ್ತನೆಯಾಗುವ ಬಗೆಯನ್ನು ಹೇಳುವ ಪದ್ಯ ಗಾಂಧಿಯವರನು ಕುರಿತದ್ದು. ನಂತರ ತಮ್ಮ ಮಾತುಗಳು ಹೇಗೆ ನಮ್ಮ ಸಂಸ್ಕೃತಿಯ ಅಭಿವ್ಯಕ್ತಿಯೆಂಬ ಮಾತು ಬಂತು.

"ನಾನು ಹೇಳತಾ ಇಲ್ಲ. ಇದನ್ನ ನನ್ನ ಒಳಗಿನಿಂದ ನನ್ನ ದೇವರು. ನನ್ನ ದೇಶ ನನ್ನ ಸಂಸ್ಕೃತಿ, ನನ್ನ ಜನ, ನಮ್ಮ ಹಿರಿಯರು, ಋಷಿಗಳು, ಅವರು ಹೇಳ ಬೇಕಾದ್ದನ್ನ ನನ್ನ ಮೂಲಕ ಹೇಳತಾ ಇದಾರೆ ಇವತ್ತಿನ ದಿವಸ. I am a teacher but I did not claim I am one. I am the mouthpiece of the gramaphone. The sound is some body else's. The voice is coming through me. ನೋಡಿದಿರಾ? I have no right to speak except in that way. It is the spirit of my fore fathers; They are speaking ಏನು ರಾಘವೇಂದ್ರ ರಾವ್ ? ಮುಖ್ಯವಾದ ಮಾತು ಇದು. ಏನು?"

"My belief is that our fathers were very great people great men. They saw this truth; sat down and saw this truth ನಾವು ಏನು ಇವತ್ತು ಯಾವುದೋ ಒಂದು ರೀತೀಲಿ ವ್ಯವಹಾರ ನಡೆಸತಿದೇವೆ.. ಈ ಮಾತನ್ನೆಲ್ಲ ಬರೆದರು. ಅವರಿಗೆ ಏನೂ ಬೇಕಾಗಿರಲಿಲ್ಲ. ಮರದ ಕೆಳಗೆ ಕೂತು ಪಾಪ...read the verses of the vedas you will find it; men who wanted nothing, sat down under trees. ಮಳೆ ಬಿಸಿಲು ಸಹಿಸಿಕೊಂಡ

ಕೊಡು, ಅವರು ಪಾಪ, ಧ್ಯಾನಾ ಮಾಡಿ, ಸತ್ಯ ಕಂಡು, ಬರೆದಿಟ್ಟರು ಅದನ್ನ, ಹೇಳತ್ತೇನೆ. ಈ ದೇಶ, ಈ ಜನ ಮಾಡಿದಹಾಗೆ ಇತರ ದೇಶದಲ್ಲಿ ಮಾಡಿ ದಾರೆಯೋ ? ಕೆಲವರು ಮಾಡಿದಾರೆ. ಆದರೆ ಇಷ್ಟು ಜನ ಮಾಡಲಿಲ್ಲ. ಇಲ್ಲಿ ಮಾಡಿದಷ್ಟು ಜನ ಮಾಡಲಿಲ್ಲ. ಇವರು ಬರೆದಿಟ್ಟ ಇಷ್ಟು ಮಾತು ಬರೆದಿಡಲಿಲ್ಲ. ಇವರು ಬಾಳಿದರು ಹಾಗೆ, ಬ್ರಾಹ್ಮಣರು, ಹೊಟ್ಟೆಗಿತ್ತೊ ಹೊಟ್ಟೆಗಿರಲಿಲ್ಲವೋ ವೇದಾನ ಹೇಳಿಸಿಕೊಂಡರು. ವೇದಾ ಕಲಿತುಕೊಂಡರು. ನಮ್ಮ ಶಾಸ್ತ್ರಿಗಳು, ನಮ್ಮ ಆಚಾರ್ರು, ಅಯ್ಯಂಗಾರ್ರು, ಕೆಲಸಮಾಡಿದಾರಪ್ಪಾ. ದುಡಿದರಪ್ಪಾ ಒಂದು ಕಾಲದಲ್ಲಿ. ಇಲ್ಲದೇ ಇದ್ದರೆ ಪುಸ್ತಕ ಬರೆಯೋದಕ್ಕೆ ತಿಳಿಬೇ ಇದ್ದ ಕಾಲದಲ್ಲಿ. ಕಾಗದ ಇಲ್ಲಾ, ಕಡ್ಡೀ ಇಲ್ಲಾ, ಬರೆಯೋನಿಲ್ಲಾ, ಮಸೀ ಇಲ್ಲಾ, ಇವತ್ತಿನ ದಿವಸಾ ನಾವು ಸುಲಭವಾಗಿ ಅಚ್ಚು ಮಾಡಿಬಿಡತೇವೆ, ಒಂದು ಪುಸ್ತಕಾನಾ ಅವತ್ತಿನ ದಿವಸಾ ಕೇಳೋವರು ಯಾರು ಇರಲಿಲ್ಲ. ಅಂಥ ಕಾಲದಲ್ಲಿ ಒಬ್ಬ ಋಷಿ ಒಂದು ಮಾತನ್ನ ಹೇಳಿ, ಅದನ್ನು ಯಾರೋ ಕಲಿತು ಉಳಿಸಿಕೊಂಡು ಬಂದಿದಾರಲ್ಲಾ ಹತ್ತು ಸಾವಿರ ವರ್ಷ. ಏನು ? ಯಾವ ಶ್ರಮ, ಎಷ್ಟು ಶ್ರಮ ಪಟ್ಟಿರಬೇಕು ಆಗ ಜನಗಳು. ಎಲ್ಲಾ ಒಂದು ಸಂಪ್ರದಾಯ ನಮ್ಮಲ್ಲಿ. ದುಡೀಬೇಕು, ಧ್ಯಾನ ಮಾಡಬೇಕು, ಸತ್ಯಾಕಾಣಬೇಕು, ಆ ಸತ್ಯವನ್ನು ಹೇಳಬೇಕು. ಮನುಷ್ಯನಾಗಿ ನಾವೂ ಉದ್ಧಾರವಾಗಬೇಕು ಇನ್ನೊಬ್ಬನ್ನ ಉದ್ಧಾರ ಮಾಡಬೇಕು, ಜೊತೆಯಾಗಿ ಉದ್ಧಾರವಾಗಬೇಕು ಅಂತ ಹೇಳಿದರು. ದುಡಿದುಕೊಂಡು ಕಷ್ಟಪಟ್ಟುಕೊಂಡು. ಸಾವಿರ ವರ್ಷ ದುಡಿದಿದಾರೆ ನಮ್ಮ ಜನ. ಯಾಕೆ ಇದನ್ನ ನಾವು ತಿಳಕೊಳ್ಳೋದಿಲ್ಲ ಇವತ್ತಿನ ದಿವಸಾ ?

ನಾನು : ಇದು, ಈ ತರದ ಶಿಕ್ಷಣ, ಕೇವಲ ಹತ್ತು ಹದಿನೈದು ಜನ ಮಾರ್ಗದರ್ಶಕರನ್ನ ತಯಾರು ಮಾಡೋದಾಗಿತ್ತೋ ಅಥವಾ ಎಲ್ಲರನ್ನೂ ಮುಟ್ಟುತಾ ಇತ್ತೋ ?

ಮಾಸ್ತಿಯವರು : ಓ ಖಂಡಿತಾ ಮುಟ್ಟಿತು. ನಮ್ಮ ಗ್ರಾಮದ ಜನರ ಪದ್ಯಗಳನ್ನ ಓದತೀರಲ್ಲಾ, ನೀವು ಜನಪದ ಸಾಹಿತ್ಯ ಅಂತೀರಲ್ಲಾ ಎಲ್ಲಿ ಬಂತು ಅಲ್ಲಿಯ ಬುದ್ಧಿ ಆ ಸಾಹಿತ್ಯ ಆ ಮಾತೆಲ್ಲ ? ಸರ್ವಜ್ಞ, ಹೇಗೆ ಸರ್ವಜ್ಞ ಆದ ?

ಶ್ರೀನಿವಾಸ್ : ಇವತ್ತೂ ಅಷ್ಟೆ. ನಮ್ಮ ಪುಸ್ತಕಗಳು ಎಲ್ಲರನ್ನೂ ಮುಟ್ಟುತಾ ಇಲ್ಲ.

ಮಾಸ್ತಿಯವರು : ಅಲ್ಲಲ್ಲಲ್ಲಾ, ನೀವು ಕೇಳೋ ಪ್ರಶ್ನೆಗೆ ಉತ್ತರಾ ಏನೂಂತಂದರೆ ಮುಟ್ಟಿದೆ ಅಂತ. ಸಾಮಾನ್ಯ ಜನ, ಹಳ್ಳಿಯ ಜನ ಜನಪದ ಸಾಹಿತ್ಯವನ್ನು ಸೃಷ್ಟಿಸಿದ್ದಾರೆ. ಅದರೊಳಗಿರೋ ಬುದ್ಧಿವಂತರ ಬುದ್ಧಿಗಿಂತ ಕಡಿಮೆ ಇಲ್ಲ, ಹ್ಯಾಗೆ ಬಂತು ಅಲ್ಲೀಗೆ ಅದು ? ಹರಿದಿತ್ತು ಅಲ್ಲೀಗೆ...

ನಾನು : ಮೇಲಿಂದ percolate ಆಗೀ ಬಂದಿರೋದು.

ಮಾಸ್ತಿಯವರು : "ಹೌದು. ಹಿಂದೆಂದೂ ತಪ್ಪಲಿಲ್ಲ. ಯಾವಾಗ ತಪ್ಪಿತು ಇದು ? ಈ ಆಂಗ್ಲ ವಿದ್ಯಾಭ್ಯಾಸ ಬಂತು. ನಾವು ಇಂಗ್ಲಿಷಿನಲ್ಲೆಲ್ಲಾ ದೊಡ್ಡ ಮನುಷ್ಯರಾಗಿಬಿಟ್ಟೆವು. ಬುದ್ಧಿವಂತನಾದೋನು ಮಾತಾಡಿದರೆ ಇಂಗ್ಲೀಷಿನಲ್ಲಿ ಮಾತಾಡೋಕೆ ಪ್ರಾರಂಭಿಸಿಬಿಟ್ಟೆವು. ಬೇರೆ ಭಾಷೇಲಿ ಮಾತಾಡೋದೆ ಬುದ್ಧಿವಂತಿಕೆ ಅಂತ ತೋರಿಸೋಕೆ ನಾವು ಯಾವಾಗ ಆರಂಭಿಸಿಬಿಟ್ಟೆವು ಆಗ ಆ ಕ್ರಮ ತಪ್ಪಿತು. ನಾನು ಇದನ್ನು ಯಾವಗಲೋ ಹೇಳಿದೆ. ಇವತ್ತೂ ಹೇಳತೇನೆ. ತಿರುಗಿ ಹೇಳತೇನೆ.

''ರವೀಂದ್ರನಾಥ ಟಾಗೋರ್ ಅಂಥ ದೊಡ್ಡ ಮನುಷ್ಯ. ಘಟ್ಟಿಗ, ಒಳ್ಳೇ ಕವಿ. ಅವನು ಘಟ್ಟಿಗಾ ಅಂತ ಹೇಳೊದಕ್ಕೆ ಜನ ಇಲ್ದೇ ಹೋಗಿ ಬಿಟ್ಟರು ಬಂಗಾಳದಲ್ಲಿ. ಅವರು ಬೇಸರಪಟ್ಟುಕೊಂಡು ಇಂಗ್ಲೆಡಿಗೆ ಹೋಗಬೇಕಾಯಿತು W.B. Yeatsಗೆ ಪದ್ಯ ಓದಿ ಹೇಳಬೇಕಾಯಿತು. ರೋಥನ್ ಸ್ಟೈನ್‌ಗೆ, ಯೇಟ್ಸ್‌ಗೆ. ಯೇಟ್ಸ್ ಒತ್ತಾಯ ಮಾಡಿ, ಮುನ್ನುಡಿ ಬರೆದು ಗೀತಾಂಜಲಿ ಪ್ರಕಟವಾಯಿತು ಇಂಗ್ಲೆಡಿನಲ್ಲಿ. ನೋಬಲ್ ಪ್ರೈಜ್ ಬಂದುಬಿಡತು, ಓ....ನಮಗೇನು ಸಂತೋಷವೋ ಸಂತೋಷ; ಹೆಮ್ಮೆ. ನಮ್ಮ ಹೆಮ್ಮೆಗೆ ಮಿತಿಯಿಲ್ಲ. ಕೆಟ್ಟ ಜನ ನಾವು....ದಡ್ಡ ಜನ, ಯೋಗ್ಯತೇ ಇಲ್ಲ. ನಮಗೆ ಜ್ಞಾನ ಇಲ್ಲವೇ? ಯಾವುದು ಒಳ್ಳೇ ಕೃತಿ ಅಂತ ಹೇಳೋದಕ್ಕೆ? ಹೀಗೇ ಯಾರಿಗೆ ಗೊತ್ತಿದೆ, ಮಾಸ್ತಿ ವೆಂಕಟೇಶ ಅಯ್ಯಂಗಾರ್....ಏನು ಬರೀತಾ ಇದಾನೆ ಅಂತ. ನಾನು ಬರೆದ ಪುಸ್ತಕವನ್ನು ಓದೋದಿಲ್ಲವಯ್ಯಾ. ನಾನು ದೊಡ್ಡವನು ಹ್ಯಾಗೆ ಆಗತೇನೆ?. ನಾನು ಇಂಗ್ಲೆಂಡಿಗೆ ಹೋಗಲಾ; ಆ ಜನಾನ ಕೇಳಲಾ? W.B. Yeatsನ ಬೇಡಲಾ? ಯಾಕೆ ಹೋಗಲಿ ನಾನು ಇಂಗ್ಲೆಂಡಿಗೆ?....ಬೇಡ. ನಮ್ಮ ಜನಕ್ಕೆ ಬೇಡವೇ ಹಾಗೇ ಇರತೇನೆ ನಾನು; ಹೊರಗಿನ ಕೀರ್ತಿ ಇಲ್ಲದೆ ಇರತೇನೆ, ಯಾಕೆ ಬೇಸರಪಟ್ಟುಕೊಳ್ಳಲಿ? ಇಲ್ಲವೇ ಈ ಹೆಮ್ಮೆ ಅನ್ನೋದು? ಬೇಕಲ್ಲವೇ? ಈ self respect ಬೇಡವೇನಪ್ಪ ನಮಗೆ? ಯಾಕೆ ಹೀಗೆ ಆಗತಿದೇವೆ ನಾವು? ಈ ಹೊತ್ತಿನ ದಿವಸಾ ಸರಿಯಾಗಿ ಯೋಜನೆ ಮಾಡೋದಿಲ್ಲ. ನಮ್ಮದು, ನಮ್ಮದು ಅಂತ ಅಭಿಮಾನವಿಲ್ಲ. ನಮ್ಮ ದೇಶ ಅಂತನ್ನೋ ಜ್ಞಾನ ಇಲ್ಲ. ತಿಳುವಳಿಕೆ ಇಲ್ಲ, ನಮ್ಮದನ್ನ....ಎಲ್ಲಾ ಎಸೆಯೋದೇ. ಎಸೆಯೋದೇ ನಮ್ಮ ದೇಶದ ಕೆಲಸಾ ಈ ಹೊತ್ತಿನ ದಿವಸಾ, ನಮ್ಮವನು ಒಬ್ಬ ಇಂಗ್ಲೇಡಿಗೆ ಹೋಗಿಬಿಟ್ಟ : ನೀರದ್ ಚೌಧರಿ ಯಂತೆ, ಯಾರು? ನಾನು ಓದಿಲ್ಲಾ. ಪಾಪ, ಒಳ್ಳೇ ಹುಡುಗ ಅಂತ ಕಾಣತ್ತೆ ಅವನು ಬರೀತಾನೆ....ತಿಳಿವಳಿಕೆ ಸಾಲದು....ಇಲ್ಲೀ ವ್ಯವಹಾರ ನೋಡಿ ಬಿಟ್ಟು ಎಲ್ಲಾನೂ ಕೆಟ್ಟದು ಹಾಗೇಂತ....ವ್ಯವಹಾರವೇ ನಮ್ಮ ದೇಶದ ಸಂಸ್ಕೃತಿ ಅಂತ ಅನ್ನೋದು.... ಅಲ್ಲೀ ವ್ಯವಹಾರ ಹ್ಯಾಗಿದೆ? ಎಷ್ಟು ಜನ ಕ್ರೈಸ್ತರಿದ್ದಾರೆ ದಿಟವಾಗಿ ಇಂಗ್ಲೆಂಡಿನಲ್ಲಿ? ಕ್ರೈಸ್ತರು ಎಷ್ಟು ಜನ ಇದಾರೆ ಅಂತ ನಾ ಕೇಳೋದು. ಹಿಂದೂಧರ್ಮ ಏನಾಗಿದೆ ಅಂತುದ್ರೆ. ಕ್ರೈಸ್ತಧರ್ಮ ಏನಾಗಿದೆ ಮಣ್ಣು? ಇಸ್ಲಾಮು ಏನಾಗಿದೆ? peace, peace, peace ಅಂದ. ಯಾರು? ಹಜರತ್ ಮಹಮ್ಮದ್, ಇವರು ಏನಾಗಿದಾರೆ

ಈಗ? ಒಬ್ಬರನ್ನೊಬ್ಬರು ಕೊಲ್ಲತಾ ಇದ್ದಾರೆ, ಯಾವ ಧರ್ಮ. ಆಚಾರದಲ್ಲಿ ಗುರುವಿನ ಉಪದೇಶಕ್ಕೆ ತಕ್ಕ ಹಾಗೆ ನಡೀತಾ ಇದೆ?....

We are all Hindus muslims and Christians by denying the preachings of our teachers in our action, in our daily life ಅಲ್ಲವೇ....So what is the way out of this moress, this wilderness, I say do we teach the people.

ನಾನು : ಅಲ್ಲಾಸಾರ್ .... ಇಷ್ಟು ವರ್ಷಗಳಿಂದ teach ಮಾಡಿ ಆಗದೇ ಇದ್ದಾಗ....

ಮಾಸ್ತಿಯವರು : ಯಾರರೀ teach ಮಾಡಿದರು. ಮಾಡಲಿಲ್ಲ ಅಂತ ನಾನು ಹೇಳತಾ ಇದೇನೆ ನಿಮಗೆ. ತಿಳಕೊಳ್ಳಲಿಲ್ಲ, ಉಪದೇಶ ಏನು ಮಾಡುತ್ತಾನೆ, ಇವನ ತಲೇನ ಇವನು....

ನಾನು : ಹಾಗಾದರೆ ಜನರಿಗೆ ಮುಟ್ಟಿದ ನೀತಿ ಯಾವುದು?

ಮಾಸ್ತಿಯವರು: ಹಾಂ..ಎಷ್ಟೋ ಸಾವಿರ ವರ್ಷದ ಹಿಂದೆ ಮಾಡಿದ ಕೆಲಸಾ.... ಪರಂಗಿಯೋರು ಬರೋಕೆ ಮುಂಚೆ ಮಾಡಿದ ಕೆಲಸ. ಅದರಿಂದ ಜನಗಳಲ್ಲಿ ಸಂಸ್ಕೃತಿ ಇನ್ನೂ ಉಳಕೊಂಡಿದೆ. ಈಗ ನಾವು ಬಿಟ್ಟು ಬಿಟ್ಟೆವು ಆ ಕೆಲಸಾನ. ತಿರುಗಿ ಆರಂಭಿಸಬೇಕು ಅದನ್ನ. ಹೇಗೆ? ನಾವು ತಿರುಗಿ ಅದನ್ನ ತಿಳ್ಕೋಬೇಕು. ಕಲೀಬೇಕು, ಹ್ಯಾಗೆ? ಅನುಭವಿಸಬೇಕು ಒಳಗಡೆ ಅದನ್ನ. ನಮ್ಮ ದೇಶದ ಹಿಂದಿನ ಚರಿತ್ರೆ ಏನಿದೆಯೋ ಅದನ್ನ ನೆನಸಿಕೊಂಡು, ನಾವು ಒಳ್ಳೆಯವ ರಾಗೋಣ. ನಮ್ಮ ಜನಕ್ಕೆ ಒಳ್ಳೇದು ತೋರಿಸಿಕೊಡೋಣ, ಅಂತಮಾಡಬೇಕು. ಇದಕ್ಕೆಲ್ಲ ಇವತ್ತಿದ ದಿವಸ ಯಾರ್‍ಯಾರು ಏನೇನು—ದಲಿತರು, ಬಂಡಾಯದೋರು, ಈ ಶೂದ್ರ ಅನ್ನೋರು ಯಾರ್‍ಯಾರು ಏನೇನು ಹೇಳತಾ ಇದೀರೋ, ಇದೆಲ್ಲಾ ಅದರಲ್ಲಿ ಸೇರಿದೆ, ಏನು ಶೂದ್ರ ಅಂದರೆ? ನಾನು ಶೂದ್ರನೇ. ದುಡಿದೆ, ಹೊಟ್ಟೆ ಹೊರಕೊಂಡೆ. ಶೂದ್ರ ಅಲ್ಲವೇ? ಶೂದ್ರನೇ ನಾನು. ಇದೇನು ಮಾಡಿದ್ದಾರೆ? ಈ ಹೊರಗಿನ ಜನ ಬಂದು ಬಿಟ್ಟರು. ಬಂದು ಬಿಟ್ಟು ನಮ್ಮಲ್ಲಿ ಜಗಳ ಹುಟ್ಟಿಸಿ ಬಿಟ್ಟರು. ನಮ್ಮಲ್ಲಿ ಒಬ್ಬರಿಗೊಬ್ಬರು ಜಗಳ ಹುಟ್ಟಿಸದೇ ಇದ್ದಿದ್ದರೆ ಅವರು ಬದುಕೋ ಹಾಗಿಲ್ಲ. ಅದಕ್ಕೆ ಏನು ಮಾಡಿದರು ಹಳೇ ಕಥೆ ಇದೆ ನಮ್ಮಲ್ಲಿ, ಇಬ್ಬರು ಗಂಡ ಹೆಂಡತಿ ಬಹಳ ಸುಖವಾಗಿ ಇದ್ದರು ಸಂತೋಷವಾಗಿ ಇದ್ದರು ಅವರು, ಈ ಹುಡುಗೀನ ಕೆಡಿಸಬೇಕು ಅಂತ ಒಬ್ಬ ಬಂದ. 'ಲೇ ನಿನ್ನ ಗಂಡ ನಿನ್ನ ಮೆಚ್ಚಿಬಿಟ್ಟಿದಾನೆ, ಬಹಳ ಒಳ್ಳೆಯೋನು ಅಂದುಕೊಂಡು ಬಿಟ್ಟಿದೀಯಲ್ಲಾ ಅವನು ಹಿಂದಿನ ಜನ್ಮದಲ್ಲಿ ಉಪ್ಪಾರ ಆಗಿದ್ದ ಅಂತ ಅಂದ. 'ಅಂ....ಹಾಗಾ' ಅಂತಂದ್ಲು ಅವಳು 'ಬೇಕಾದ್ರೆ ಅವನು ಮಲಗಿರೋವಾಗ ಅವನ ಬೆನ್ನು

ನೆಕ್ಕು ಉಪ್ಪುಪಾಗಿರುತ್ತೆ' ಅಂದ. ಆಮೇಲೆ ಗಂಡನ ಹತ್ತಿರ ಹೋದ 'ಲೋ ಬಹಳಮೆಚ್ಚಿಕೊಂಡಿದೀ ಹೆಂಡತೀನ ನೀನು, ಹಿಂದಿನ ಜನ್ಮದಲ್ಲಿ ಅವಳು ನಾಯಿಯಾಗಿದ್ದಳು' ಹಾಗೇಂತ ಅಂದ. 'ಹಾಂ' ಅಂದ ಅವನು. 'ಹೌದು, ನೀನು ಒಂದು ದಿನ ಮಲಗಿದ್ದ ಹಾಗೆ ಮಾಡು, ಅವಳು ನೆಕ್ಕತಾಳೆ ನಿನ್ನ ಬೆನ್ನು' ಅಂದ. ಒಂದು ನಾಕಾರು ದಿನ ಕಾದಿದ್ದರು ಇಬ್ಬರೂ. ಒಂದು ದಿನ ಅವನು ಮಲಗಿದ್ದ ಹಾಗೆ ಮಾಡಿದಾನೆ. ಅವಳು ನೆಕ್ಕಿದಳು. 'ಲೇನಾಯಿ' ಅಂದ ಇವನು. 'ಲೋ ಉಪ್ಪಾರ' ಅಂದಳು ಅವಳು. ಜಗಳ ಆಡಿದರು.

"ಪರಂಗಿಯೋರು ನಮಗೆ ಮಾಡಿದ ಉಪಕಾರ ಇದು. ನಮ್ಮದೇಶದಲ್ಲಿ ಬ್ರಾಹ್ಮಣ ಬ್ರಾಹ್ಮಣೇತರ ಜಗಳ ಮಾಡಿದ್ದೇ ಇಲ್ಲ. ಒಂದು ಗ್ರಾಮದಲ್ಲಿ ಒಂದು ಮನೇ ಇರೋದು. ಎರಡು ಮನೆ ಇರೋದು ಬ್ರಾಹ್ಮಣನ ಮನೆ. ನಮ್ಮ ಒಕ್ಕಲು ಮಕ್ಕಳ ಮನೆ, ಬೇಡರ ಮನೆ, ಕುರುಬರ ಮನೆ, ಹರಿಜನರ ಮನೆ ಮೂವತ್ತು ಇರೋದು. ಇವರೆಲ್ಲಾ ಸೇರಿ ಈ ನಾಕು ಜನಾನ ಸಾಕಿ ಕೊಂಡರು. ಯಾಕೆ? ಇವರು ಏನಾದರೂ ಒಳ್ಳೇದು ಮಾಡತಾರೆ ಅಂತ. ಸಾವಿರ ರೂಪಾಯಿ ಸಂಬಳ ಇರಲಿಲ್ಲ ಬ್ರಾಹ್ಮಣನಿಗೆ. ಇವರು ಗಂಜಿಕೊಟ್ಟರೆ ಉಂಟು ಇಲ್ಲದೇ ಇದ್ದರೇ ಹೊಟ್ಟೆಗಿಲ್ಲ."

ಶ್ರೀನಿವಾಸ್ : ಈವಾಗಲೂ ಹಳ್ಳಿಗಳಿಲ್ಲಿ ಹಾಗೇ ಇರೋದು.

ಮಾಸ್ತಿಯವರು : ಹಾಗೇ ಇದಾರೆ ಪಾಪ. ಹೀಗಿದ್ದ ಜನಾನ ಒಡೀಬೇಕು ಯಾಕೆ? ಆಂಗ್ಲರಿಗೆ ವಿರೋಧಿ ಯಾರು? ಮೊದಲು ಬ್ರಾಹ್ಮಣನೇ. 'ಹೋಗಲಿ ಈ ಪಾಪಿಗಳು, ನಮ್ಮನ್ನು ಲೂಟಿ ಮಾಡತಾಇದಾರೆ' ಅಂತ ಪ್ರಾರಂಭಿಸಿದ ಜಗಳಾನ. Independence ಅಂತ ಮಾತು ಜಗಳ ಮೊದಲು ಎತ್ತಿದವರು ಯಾರು? ಬ್ರಾಹ್ಮಣರು. ಆ ಜನ 'ಈ ಬ್ರಾಹ್ಮಣ ಹಂದೀ ಮಕ್ಕಳನ್ನ, ಮೊದಲು ಇವರಿಂದ ಬೇರೇ ಮಾಡಬೇಕು' ಅಂತ ಹೇಳಿ ಬಿಟ್ಟು. ಅವರ ಮೇಲೆ ದ್ವೇಷ ತಂದಿಟ್ಟರು. ಹೇಗೆ? 'ನೋಡಿ ಸರ್ಕಾರದ ಕೆಲಸದಲ್ಲಿ ಎಲ್ಲ ಬ್ರಾಹ್ಮಣರೇ ಇದಾರೆ. ಬೇರೆ ಜನ ಯಾರೂ ಇಲ್ಲ' ಅಂತ ಹೇಳಿ ಬಿಟ್ಟು, ಅವರ ಮೇಲೆ ದ್ವೇಷ ತಂದಿಟ್ಟರು. ಹೇಗೆ? 'ನೋಡಿ ಸರಕಾರದ ಕೆಲಸದಲ್ಲಿ ಎಲ್ಲ ಬ್ರಾಹ್ಮಣರೇ ಇದಾರೆ. ಬೇರೆ ಜನ ಯಾರೂ ಇಲ್ಲ' ಅಂತ ಮದರಾಸಿನಲ್ಲಿ ಅರಂಭಿಸಿದರು ಇದನ್ನ. Justice party ಅಂತ ಸರಕಾರಿ ಕೆಲಸದಲ್ಲಿದ್ದು ಇವನು ಮಾಡೋ ಊಟಕ್ಕಿಂತ, ಊರಲ್ಲಿ ನೆಲ ಉಳೋನು ಮಾಡೋ ಊಟ ಕಡಿಮೆಯಾಗಿತ್ತೇ? ಚೆನ್ನಾಗಿರಲಿಲ್ಲವೇ? ಏನಾಗಿತ್ತು? ಜಗಳ ಹಚ್ಚೋಕೆ ಮಾಡಿದ ಅವನು. ನಮ್ಮೋರೆಲ್ಲ ಒಪ್ಪಿಕೊಂಡರು. ಇವತ್ತಿಗೂ ನಡೀತಾ ಇದೆ ಜಗಳ. Backward classes ಅಂತೆ. 'ಬ್ರಾಹ್ಮಣನ್ನ ಕೆಡಿಸಿದ್ರೆ ಏನು ತಪ್ಪು? 'ಒಕ್ಕಲಿಗನ್ನ ಕೆಡಿಸಿದ್ರೆ ಏನು ತಪ್ಪು? ಯಾರೋ ಒಬ್ಬರನ್ನ ಕೆಡಿಸಲೇ ಬೇಕು,

ಇನ್ನೊಬ್ಬರು ಬದುಕೋಕೆ. ಮಾಡಲಿ, ಅದಕ್ಕೇನಂತೆ, ಎಲ್ಲರನ್ನೂ ಕಾಪಾಡೋ ಬುದ್ಧಿವಂತ ಬೇರೆ ಯಾರೋ ಇದಾನೆ. ನಾವು ನೀವು ಅಲ್ಲ.

"ನೋಡಿದಿರಾ, ಅಂದರೆ, ಊರಿನ ಜನಾ ಎಲ್ಲರೂ ಬದುಕಬೇಕು ಅಂತ ಅನ್ನೋದು ಒಂದು ಯೋಚನೆ ಇಟ್ಟುಕೊಂಡು. ಊರಿನ ಹಿರಿಯರು ; ದೇಶದ ಜನ ಎಲ್ಲಾ ಸುಖವಾಗಿರಬೇಕು ಅಂತ ದೇಶದ ಹಿರಿಯರು : ರಾಷ್ಟ್ರದ ಜನ ಎಲ್ಲಾ ಸುಖವಾಗಿರಬೇಕು ಅಂತ ರಾಷ್ಟ್ರದ ಹಿರಿಯರು ; ಲೋಕ ಚೆನ್ನಾಗಿರಬೇಕು ಅಂತ ಲೋಕದ ಹಿರಿಯರು; ಜೊತೆ ಸೇರಿ, ಯೋಚನೇ ಮಾಡಿ, ಕೆಲಸಾ ಮಾಡೋದೇ ದಾರಿ. ಬೇರೆ ಯಾವುದೂ ಇಲ್ಲ. ನಾನ್ಯಃ ಪಂಥಾಃ ಅಯನಾಯ ವಿದ್ಯತೇ.

Make up your minds to be friends with every body, with even your enemy. Remember that your opponent may be your God. ಕಿರಾತ, ಅರ್ಜುನನಿಗೆ ಎದುರು ಬಂದು ನಿಂತನಲ್ಲಾ ಆ ಕಿರಾತ, ಜಗಳ ಆಡೋಕೆ ಅಂತ, ಯಾರೂ ಅಲ್ಲ, ದೇವರೇ Your enemy, who faces you, fighting you, is not any one else. He is your God. ಯಾಕೆ ಹೀಗೆ ಮಾಡತಾನೆ ಅಂದರೆ ನಾಟ್ಯವಯ್ಯಾ ಇದು. ಕಪಟ ನಾಟಕ ಸೂತ್ರ ಧಾರಿ ಅಂತಾ ಹೇಳತಾರಲ್ಲ ದೇವರನ್ನ. ಅದರ ಅರ್ಥ ಏನೂ ಅಂದರೆ ಇದು, ಈಗ ನೋಡಿ. ನಮ್ಮ ವೀರಣ್ಣ ನನಗೊಂದು ಸಾರಿ ಹೇಳಿದರು. 'ಏನು ಸ್ವಾಮಿ ಮಾಡೋದು ? ಮುಂದೇದು, ಈ ಹುಡುಗ ಹೊಡಿಯೋ ಅಂದರೆ ಹೊಡೀ ವೊಲ್ಲದು' ಅಂತ. ನಾಟಕದಲ್ಲಿ ಅವನು ರಾಜನಾಗಿದಾನೆ, ಯಾರು ? ಆಳು ಸಂಬಳ ತಗೊಳ್ಳೋನು. ಇವನು ಸೇವಕನಾಗಿದಾನೆ, ಈ ವೀರಣ್ಣ. ನಾಟಕದಲ್ಲಿ ಇವನು ತಪ್ಪು ಮಾಡಿದ ಅಂತ ಅವರಿಗೆ ಇವನು ಹೊಡೀಬೇಕೂಂತೆ ಇದೆ. ಅವನು ಹೊಡೆಯೊಲ್ಲ ಅಂತಾನೆ. ಅರೇ ನಾಟಕ ಕೆಟ್ಟು ಹೋಗತ್ತಲ್ಲೊ ಮುಂದೇದೆ."
So remember that the person who comes in front of you is your god. Go to him, tell him, 'this is a play. hit me.' so, you have no enemies.

ಹೀಗೆ ಗಾಂಧೀಜಿಯವರ ತತ್ವಜ್ಞಾನದ ಔಚಿತ್ಯವನ್ನು ಕುರಿತಾದ ಪ್ರಶ್ನೆ ಮಾನ್ಯರಾದ ಮಾಸ್ತಿಯವರ ಹಲವು ವಿಚಾರಗಳಿಗೆ ಮಿಾಟುಗೋಲಾಯಿತು. ಎಲ್ಲ ಸಂಗತಿಗಳೂ ನಾವು ಕೇಳಬೇಕಾದವು. ಆಲೋಚನೆ ಮಾಡಬೇಕಾದವು. ಇಷ್ಟಕ್ಕೂ, ಖಚಿತವಾದ ಪ್ರಶ್ನೆ ಉತ್ತರಗಳ ಸೀಮಿತ ಉದ್ದೇಶ ಇಟ್ಟುಕೊಂಡು ಹೋದವರಲ್ಲ ನಾವು. ನಮ್ಮ ನಾಡು, ನುಡಿ ಮತ್ತು ನಾಡವರ ಒಳಿತಿಗಾಗಿ ಯಾವಾಗಲೂ ತಹತಹ ಪಡುತ್ತಿರುವ, ಈ ಹಿರಿಯರ ವಿಚಾರಗಳನ್ನು 'ಶೂದ್ರ'ದ ಓದುಗರಿಗೆ ಪರಿಚಯ ಪರಿಚಯ ಮಾಡಿಕೊಡುವುದು ನಮ್ಮ ನಿಜವಾದ ಗುರಿಯಾಗಿತ್ತು.

ನಾನು ಮಾಸ್ತಿಯವರನ್ನು ಕೇಳಿದ ಮೂರನೆಯ ಪ್ರಶ್ನೆ ಭಾರತೀಯ

ಸಮಾಜದಲ್ಲಿ ಮಹಿಳೆಯರ ಸ್ಥಾನಮಾನ ಮತ್ತು ಅವರ ಶೋಷಣೆಯನ್ನು ಕುರಿತದ್ದು. ಅನೇಕ ಕೃತಿಗಳಲ್ಲಿ ಹೆಣ್ಣಿನ ಮನಸ್ಸನ್ನು ಬಹಳ ಚೆನ್ನಾಗಿ ಅರ್ಥ ಮಾಡಿಕೊಂಡು ಚಿತ್ರಿಸಿರುವ ಅವರು ತಮ್ಮ ಸಂಪ್ರದಾಯ ನಿಷ್ಠೆಯ ನೆಲೆಯಿಂದ ಯಾವ ಬಗೆಯ ಪ್ರತಿಕ್ರಿಯೆ ತೋರುವರೆಂಬುದನ್ನು ತಿಳಿಯುವುದು ನನ್ನ ಉದ್ದೇಶವಾಗಿತ್ತು. ಮೊದಮೊದಲು ಉಳಿದ ಸಮಾಜಗಳೊಂದಿಗೆ ಹೋಲಿಸಿದಾಗ ಭಾರತದಲ್ಲಿ ಹೆಣ್ಣಿನ ಸ್ಥಾನಮಾನಗಳು ಉತ್ತಮವಾಗಿಯೇ ಇವೆ ಎಂದ ಅವರು ಕ್ರಮೇಣ ತಮ್ಮ ಧೋರಣೆಗಳನ್ನು ಸೂರ್ಯ ಸ್ಪಷ್ಟವಾದ ರೀತಿಯಲ್ಲಿ ಹೇಳಿದರು. ನಾನು ಕೇಳಿದೆ:

"ಸಾರ್, ಈ ನಮ್ಮ ದೇಶದಲ್ಲಿ ಅಥವಾ ಎಲ್ಲ ದೇಶಗಳಲ್ಲೂ ಅಷ್ಟೆ ಅನ್ನಿಸುತ್ತೆ. ಗಂಡು ಹೆಣ್ಣಿನ ಸಂಬಂಧದಲ್ಲಿ ಹೆಣ್ಣಿಗೆ ಅನ್ಯಾಯ ಆಗಿದೆ ಅನ್ನೋ ಮಾತು..." ಅವರು ತಕ್ಷಣ ಉತ್ತರಿಸಿದರು.

"ಎಂಥಾ ಮಾತು ! ನಮ್ಮ ತಾಯಿಗೆ ನಾನು ಅನ್ಯಾಯ ಮಾಡಿದೇನೆಯೇ ?"

"ನಮ್ಮ ದೇಶ ಹೆಣ್ಣನ್ನ ನಡೆಸಿಕೊಂಡಿರೋ ರೀತಿ ಸರಿಯಾಗಿದೆ ಅಂತ ನಿಮಗೆ ಅನ್ನಿಸತ್ತೆಯೇ ?"

"Absolutely sir, ನಮ್ಮವರು ಮೊದಲಿನಿಂದ ಹೇಳಿದಾರೆ ಅದನ್ನ ನಾ ಹೇಳತೇನೆ. ಇಂಗ್ಲೇಂಡಿನಲ್ಲೇನೆ...ಯಾರೋ ಹೇಳಿದರಂತೆ, police station ಅಲ್ಲಿ: "ಈ ಬೀದೀಲಿ ಒಂದು ಮನೇಲಿ ಗಂಡಾ ಆದೋನು ಹೆಂಡತೀನ ಹೊಡೆದಾ" ಅಂತ. ಈ ಪೋಲಿಸಿನೋನು ಹೋದನಂತೆ. ಆ ಬೀದಿಗೆ. ಒಂದು ಮನೇ ಬಾಗಿಲು ತಟ್ಟಿದನಂತೆ, ಕೇಳಿದನಂತೆ, "ಇಲ್ಲಿ ಯಾವುದೋ ಒಂದು ಮನೇಲಿ ಗಂಡ ಹೆಂಡತೀನ ಹೊಡೆದನಂತಲ್ಲ ಯಾವ ಮನೆ ತಾಯಿ ಅದು" ಅಂತ. ಆಕೆ ಹೇಳಿದಳು: ಬೀದಿಲಿ' ಒಂದೇ ಮನೇಲಿ ಹಾಗಾಯ್ತುಅಂದರೆ ಅದು ಈ ಬೀದಿ ಅಲ್ಲ, ಬೇರೆ ಬೀದಿ ಅಂತ. ಎಲ್ಲಾ ಕಡೇಲೂ ಇದೆ ಅದು. ಗಂಡಾದದ್ದು ಹೆಣ್ಣಾದದ್ದನ್ನ ತಪ್ಪಾಗಿ ನಡೆಸಿ ಕೊಳ್ಳೋದು. ನಮ್ಮಲ್ಲಿ ಮಾತ್ರ ಇದೆಯೋ ? ಬೇರೆ ಕಡೆ ಇಲ್ಲವೋ ? ಇಂಗ್ಲೇಂಡಿನಲ್ಲಿ Profumo ಅನ್ನೋನು ಅವನೇನು ಮಾಡಿದ ? ಎಲ್ಲಿ ಹುಡುಕತೀರಿ ನೀವು ಸತ್ಯವಂತರನ್ನ, ಕೆಟ್ಟ ಮಾತಾಡೋಕೇನು ಎಲ್ಲಾ ಕಡೇನೂ ಜನ ಇದ್ದೇ ಇದ್ದಾರೆ. ಆದರೆ ನಮ್ಮ ದೇಶದಲ್ಲಿ ಹೆಂಗಸನ್ನ ಮರ್ಯಾದೆಯಿಂದ ಕಂಡವರು ಹೆಚ್ಚು ಜನ ಇದ್ದಾರೆ."

ನಾನು : ಹಾಗಲ್ಲ ಸಾರ್, ಅದು ಬರೀ ಮರ್ಯಾದೆ ಪ್ರಶ್ನೆ ಅಲ್ಲ. ಜೀವನದ ಬೇರೆ ಬೇರೆ ಕ್ಷೇತ್ರಗಳಲ್ಲಿ.......

ಮಾಸ್ತಿಯವರು : ಏನು ಉದ್ಧಾರ ಮಾಡತಾ ಇದೀರಿ ? ಹೆಂಗಸರನ್ನ ಕಚೇರಿಗೆ ಕಳಿಸಿ ಸಂಪಾದನೆ ಮಾಡಿಸೋದರಿಂದ ? ನಮ್ಮವರು ಹೇಳಿದರು ಹಿಂದೆ. ಏನಂತಾ ? ಪಿತಾ ರಕ್ಷತಿ ಕೌಮಾರೇ ಭರ್ತಾರಕ್ಷತಿ ಯೌವನೇ ಪುತ್ರಾಃ ರಕ್ಷಂತಿ ವಾರ್ಧಿಕ್ಯೇ ನಸ್ತ್ರೀ ಸ್ವಾತಂತ್ರ್ಯಮರ್ಹತಿ ಅಂತ. ಇದನ್ನು ಹೊರಗಿನವರು ಏನು

ಮಾಡಿಬಿಟ್ಟರು ಅಂದರೆ ಸ್ತ್ರೀಗೆ ಸ್ವಾತಂತ್ರ ಬೇಡ ಅವಳಿಗೆ ಅದರ ಅರ್ಹತೆ ಇಲ್ಲಾ ಅಂತ. ಆದರೆ ಆ ಶ್ಲೋಕದ ಅರ್ಥ ಸ್ತ್ರೀಸ್ವಾತಂತ್ರ್ಯ ಬೇಡ ಅಂತ.

ನಾನು : ಅರ್ಥವಾಗಲಿಲ್ಲ ಸಾರ್.

ಮಾಸ್ತಿಯವರು : ಸ್ತ್ರೀ ಸ್ವಾತಂತ್ರ್ಯ ಅಂದರೆ ಸ್ತ್ರೀ ತನ್ನ ಹೊಟ್ಟೆ ತಾನು ಹೊರಕೊಳ್ಳೋ ಪಾಡು ಅಂತ. ಆ ಗತಿ ಬೇಡ ಅಂತ. ರಕ್ಷತಿ ಅಂದರೆ ಕಾಪಾಡ ತಾನೆ ಅಂತ. ಕೆಳಗಿಟ್ಟು ತುಳೀತಾನೆ ಅಂತ ಅಲ್ಲ. ಪುತ್ರಾಃ ರಕ್ಷಂತಿ ವಾರ್ಧಿಕ್ಯೆ ಅಂದರೆ ಮಕ್ಕಳಾದವರು ತಾಯಿಾನ ಏನು ಮಾಡುತಾರೆ ಅಂತ ? ತಾಯಿ ಆದವಳನ್ನ ತನ್ನ ಹೊಟ್ಟೆ ತಾನೇ ಹೊರಕೊಳ್ಳೋ ಸ್ಥಿತಿಗೆ ಬಿಡಬೇಡರೋ ಅಂತ ಉಪದೇಶ.

ನಾನು: ಅಲ್ಲಾ, ಗಂಡಸು ಇಷ್ಟೆಲ್ಲಾ ಕೆಲಸ ಮಾಡತಾ ಇರೋದು ಬರೀ ಹೊಟ್ಟೆ ಹೊರೆಯೋಕೆ ಮಾತ್ರಾನಾ ? ವಿಜ್ಞಾನ ಸಾಹಿತ್ಯ ಹೀಗೆ ಅನೇಕ ಕ್ಷೇತ್ರಗಳಲ್ಲಿ ತನ್ನ ಪ್ರತಿಭೆ ತೋರಿಸಬಹುದಲ್ಲವಾ ?

ಮಾಸ್ತಿಯವರು: ಮೊದಲ ಕೆಲಸ ಏನು ಸ್ವಾಮಿಾ ? ಅನ್ನ ಅಲ್ಲವೋ ? ಆಮೇಲೆ ಯಾರು ಬೇಡಾಂತ ಅಂದರು ? ಹೆಂಗಸು ಹೊರಗೆ ಹೋಗೋದು ಬೇಡ ಅಂತ ಅಂದರು ಯಾಕೆ ? ಇವತ್ತು ಕೆಲಸಕ್ಕೆ ಹೋಗತಾ ಇರೋ ಹೆಂಗಸಿನ ಗತಿ ಏನಾಗಿದೆ ? ಬಲ್ಲಿರಾ ? ಅಥವಾ ಕಾಣೆರೋ ? ಕಂಡಿದ್ದರೆ ಇದೇ ಅವಸೆ ಮುಂದುವರೀಲಿ ಅಂತೀರೋ ? ನನಗೆ ಇಷ್ಟ ಇಲ್ಲ. ನನ್ನ ಮಕ್ಕಳು ಹೊರಗೆ ಹೋಗಿ ಯಾರ ಹತ್ತರಾನೋ ನಿಂತು ಕೊಂಡು, ಕೆಲಸಾ ಮಾಡಿ 'ಸಾರ್ ಅಂತಂದು' ಅವನು ಹೇಳಿದ ಮಾತನ್ನು ಬರಕೊಂಡು ಕಾಸು ತಗೊಂಡು ಒರೋದು ನನಗೆ ಇಷ್ಟ ಇಲ್ಲ ಅಂತ ಹೇಳತೇನೆ. ನನ್ನ ಹೆಣ್ಣು ಮಕ್ಕಳ ವಿಷಯಕ್ಕೆ ತುಂಬಾ ಕನಿಕರದಿಂದ ವಿಶ್ವಾಸದಿಂದ ಹೇಳತೀನಿ ನಾನು. ಮದುವೆ ಆದ ಗಂಡಂದಿರು ಸಂಪಾದನೆ ಮಾಡಿ ನೋಡಿಕೊಳ್ಳಬೇಕು ಅವರನ್ನ.

ನಾನು: ಇದನ್ನ ಹೆಣ್ಣು ಮಕ್ಕಳ ಬಗ್ಗೇನೇ ಯಾಕೆ ಹೇಳತೀರಿ ? ಗಂಡಸರ ಬಗ್ಗೆ ಯಾಕೆ ಹೇಳಲ್ಲ ? ಅವರೂ ತಲೆಬಾಗಬೇಕಾಗುತ್ತೆ, ಭಿಕ್ಷೆ ಬೇಡಬೇಕಾಗುತ್ತೆ.

ಮಾಸ್ತಿಯವರು : ಬಾಗಲಿ. ಬಾಗಲಿ ಅಂತ ಹೇಳಿದೆ. ಪೂರ್ವದಿಂದ ಬಂದಿದೆ ಇದು ಗಂಡಸಿನ ಕೆಲಸಾ ಅಂತ. ಹೆಣ್ಣಿನ ಪಾಡೂ ಏನೂ ಅಂತ ಅಂದರೆ, ಗಂಡಾದವನಿಗೆ ಯಾರೂ ಬಲವಂತ ಮಾಡಿ ಏನೂ ಮಾಡೋಕಾಗಲ್ಲ. ಹೆಣ್ಣು ಹಾಗಲ್ಲ, ಮುಟ್ಠಾಳ ನಾದವನು ಅವಳನ್ನ ಕೆಡಿಸತಾನೆ. ಅಶುದ್ಧವಾದ ಕಣ್ಣುಗಳಿಂದ ನೋಡುತಾನೆ. ಇಷ್ಟವೇ ನಿಮಗೆ ಇದು ? ಏನು ಸ್ವಾಮಿ, ನಿಮ ಮಗಳನ್ನ ಯಾವನೇ ಆಗಲಿ ಹಾಗೆ ನೋಡಲಾ ? ಜನ ದುಷ್ಟವಾದ ಕಣ್ಣುಗಳಿಂದ ?

ಶ್ರೀನಿವಾಸ : ನಾವು ಹೊರಗೆ ಹೋದಾಗ ಪಡೆಯೋ ಅನೇಕ ಅನುಭವ ಗಳಿಂದ ಹೆಣ್ಣು ವಂಚಿತಳಾಗ್ತಾಳೆ.

ಮಾಸ್ತಿಯವರು: ಯಾವ ಅನುಭವ ? ವಂಚನೆ ಏನು ?

ಶ್ರೀನಿವಾಸ : ನನಗೆ ಅದು ಗೊತ್ತಿಲ್ಲ.

ಮಾಸ್ತಿಯವರು : ಅಲ್ಲ, ತಿಳಿಯಬೇಕು, ವಂಚನೆ ಅಂದರೆ ಏನು ? ಯಾವುದೇ ವಿಚಾರ ಆರಂಭ ಮಾಡಿದ ಮೇಲೆ ಬುಡ ಮುಟ್ಟ ಹೋಗಬೇಕು.

ನಾನು: ಅಲ್ಲ ಒಬ್ಬ ದೊಡ್ಡ ವಿಜ್ಞಾನಿಯಾಗ ಬಹುದಾದ ಹೆಣ್ಣು....

ಮಾಸ್ತಿಯವರು: ಯಾರು ಬೇಡಾಂದರು?

ನಾನು: ಅದಕ್ಕೆ ಅವಕಾಶ ಇಲ್ಲವಲ್ಲ?

ಮಾಸ್ತಿಯವರು : ಹೇಳಿಕೊಡಿ, ವಿಜ್ಞಾನ ಹೇಳಿಕೊಡಿ. ಮಾಡಲಿ ಅವರು

ನಾನು : ಹಾಗಾದರೆ ನೀವು ಹೇಳತಿರೋದು ಹೆಣ್ಣು ಕೆಲಸಕ್ಕೆ ಸೇರೋದು ಮಾತ್ರ ಬೇಡ ಅಂತಾನಾ?

ಮಾಸ್ತಿಯವರು: ಹೌದು ಸ್ವಾಮಿ. ಹೊಟ್ಟೆ ಹೊರೆಯೋದು ಬೇಡ ಅಂತ. ನಾನು ಹೋಳೋದೆಲ್ಲ ಹಿಂದಿನವರು ಹೇಳಿದರು. ಹೆಂಗಸಾಗಿ ಹುಟ್ಟಿ ಹೊಟ್ಟೆ ಹೊರಕೊಳ್ಳೋ ಸ್ಥಿತಿಗೆ ಬರೋದು ಬೇಡ.

I do not like the idea of woman having to work for her food. Let her be every thing else. I donot object. I am not objecting.

I want a high status for woman. I have said also that woman is not equal to man, She is superior. Whoever says that woman is equal to man is doing harm to womanhood.

Let them learn any quantity of literature, history and philosophy, let them not have to earn their bread.

ನಾನು : ಅವರು ಪಡುತ್ತಾ ಇರೋ ತೊಂದರೆಗೆ ಅವರ Economic dependence ಕಾರಣ ಅಂತ ನಿಮಗನಿಸೋದಿಲ್ಲವಾ ?

ಮಾಸ್ತಿಯವರು : ನನಗನ್ನಿಸೋದಿಲ್ಲ, ಅಣ್ಣಿಸತಾ ಇಲ್ಲ. I am telling you I have been a husband like any other husband. I have been rough to my wife at times but never cruel. And my wife had to put up with me. Where in marriage is there cent percent accord? What do you say? You agree with me?

ನಾನು : ಹೆಣ್ಣಿಗೆ Political Participation ಬೇಕಾಗಲ್ಲವಾ ಸಾರ್,

ಮಾಸ್ತಿಯವರು : I don't object to any thing. Let her not have to go out and earn her bread. There is danger there. They can look after themselves. But let us not put them into posltion Where they are helplees. They can certainly look after themselves. About all my chldren. I am certain about my mother. My mother could have looked after twenty other

women. My mother was wiser then I, always; more tolerant' more undersrvnding, more kindly, more tender.

ಶ್ರೀನಿವಾಸ : ಆದರೆ ಈಗ ಹಳ್ಳೀಲಿ Urban influence ಆಗಿಬಿಟ್ಟು ಎಲ್ಲಾ....

ಮಾಸ್ತಿಯವರು : ನೀವು ಜ್ವರದ ದಿವಸಾನಾ ಹೇಳತಾ ಇದೀರಿ, ಮೈ ಕಾದಿದೆ, ಅನ್ನ ಬೇಕಾಗೋದಿಲ್ಲ. ಔಷಧಿ ಕೊಡಬೇಕಾಗುತ್ತೆ. ಜ್ವರದ ದಿವಸಾ ಇದು. What is the good of talking about these days? It is a bad day for us.

ನನ್ನ ನಾಲ್ಕನೆಯ ಹಾಗೂ ಕೊನೆಯ ಪ್ರಶ್ನೆ ಮೂರನಯದರ ಜಾಡು ಹಿಡಿದು ಮೂಡಿ ಬಂತು. ಮಾಸ್ತಿಯವರ ಬರೆಹ ಮತ್ತು ಮಾತಿನ ಸರಳತೆ ಮತ್ತು ಸ್ಪಷ್ಟತೆ ಆಶ್ಚರ್ಯ ಹುಟಿಸುವಂತಹುದು. ನಾನು ಅದರ ಬಗ್ಗೆ ಕೇಳಿದೆ. ಅವರು ಸರಳತೆಯು ಕಲಾಕೃತಿಗಳ ಅನಿವಾರ್ಯ ಲಕ್ಷಣ ಎಂದರು. ಕ್ರಮೇಣ, ಕಲೆಯಲ್ಲಿ ನೀತಿಯು ನಿರೂಪಿತವಾಗುವ ರೀತಿಯ ಕಡೆಗೆ ಮಾತು ತಿರುಗಿತು. ಅವರ ಅನಿಸಿಕೆಗಳು ಹೀಗಿವೆ:

I am able to say all these things immediately because I have thought and struggled with these questions, time after time What is the way out for our country from this morass?

The quality is somethjng given to me; I am not aware of it.

ನಾನು: ಈ ಗುಣ ಸಾಹಿತ್ಯದಲ್ಲೂ ಇರಲೇಬೇಕು ಅಂತ ಮೊದಲಿಂದ ನೀವು ಹೇಳತಾ ಬಂದಿದೀರಾ ?

ಮಾಸ್ತಿಯವರು : ಖಂಡಿತವಾಗಿ

ನಾನು : ಈ ಗುಣ ಎಲ್ಲಾ Art formನಲ್ಲೂ ಇರಲೇಬೇಕು ಅಂತ ನೀವು ಹೇಳತೀರಾ ಸಾರ್?

ಮಾಸ್ತಿಯವರು: ಓಹೋ! ಹೌದು, If you are not communicating, you are not doing any service. You may satisfy your self. By all means. But I am not satisfied.

ನಾನು : ಆದರೆ, ಓದತಕ್ಕವನಿಗೆ ಅನುಭವಿಸತಕ್ಕವನಿಗೆ ಒಂದು Degree of prepardness ಇರಬೇಕು ಅಂತ ನೀವು ನಿರೀಕ್ಷಿಸೋದಿಲ್ವೆ?

ಮಾಸ್ತಿಯವರು : ಇಲ್ಲದೆ ಇದ್ದರೆ ಆಗುತ್ತೆಯೆ? Absolutely. If you do it well, the other man wlll follow you. God has given so much average intelligence to a 'common' man, ಕುಮಾರವ್ಯಾಸನಿಗಿಂತ ಶ್ರೇಷ್ಠ ಕಾವ್ಯಾನ ಹೇಳೋಕ್ಕಾಗತ್ತೆಯೆ ಕನ್ನಡದಲ್ಲಿ? I say it is the only

great epic in Kannada. ಬೇರೆಯವರದು ಇಷ್ಟು ಚೆನ್ನಾಗಿ convey ಆಗೊಲ್ಲ But this man gives lucid water, clear water,

ನಾನು : ಅಲ್ಲಾ, ಕವಿ ಬೆಳೀತಾ ಹೋದ ಹಾಗೆ, ಕೆಲವು ಸಂದರ್ಭದಲ್ಲಿ ಅವನು ಓದುಗರಿಂದ ದೂರ ಆಗತಾನಾ ?

ಮಾಸ್ತಿಯವರು : ಆಗೋದಿಲ್ಲ, ಕವಿ ಬೆಳೆದ ಹಾಗೆ ಅವನ ಬುದ್ಧೀನೂ ಬೆಳೆಯುತ್ತೆ. ಅವನ ನುಡೀನೂ ಬೆಳೆಯುತ್ತೆ. His feelings, his desire to express, his capacities to express, clarity ಬೆಳೆಯುತ್ತೆ.

ನಾನು : ಈಗ ನಮ್ಮ ದೊಡ್ಡ ಕವಿಗಳು ಕೆಲವರು ಮೊದಲು ಬರೆದದ್ದು ಅರ್ಥವಾದಷ್ಟು, ಸ್ಪಷ್ಟವಾಗಿ ಈಚೆಗೆ ಬರೆದದ್ದು ಗೊತ್ತಾಗಲ್ಲ ಅಂತಾರೆ.

ಮಾಸ್ತಿಯವರು : ಅಂಥ ಬರಹ, ಅಷ್ಟು ಒಳ್ಳೇ ಸಾಹಿತ್ಯ ಅಲ್ಲ. ನಾನು ಹೇಳಿದ್ದೇನೆ. It may be philosopy, politics, may be any thing else. ಬೇಕಾದ್ದಾಗಬಹುದು. ಈ ಮಾತು ನಾನು ಹೇಳಿದೆ. ಸ್ನೇಹಿತರಿಗೆ ಕೋಪ ಬಂತು ನನ್ನ ಮೇಲೆ.

ಶ್ರೀನಿವಾಸ : ಈ ಮಾತನ್ನು ಟಾಲ್‌ಸ್ಟಾಯ್ ಕೂಡ ಹೇಳಿದರು. ಸಾಹಿತ್ಯ ಅರ್ಥವಾಗಬೇಕು. ಅದಕ್ಕೆ ಉದ್ದೇಶ ಇರಬೇಕು ಅಂತ.

ಮಾಸ್ತಿಯವರು : ಉದ್ದೇಶ ಇದ್ದೇ ಇರುತ್ತೆ. ಈಗ, War and Peace is considered a great novel, but it starts with a purpose, He has given a picture of what life was, what war was and left it to teach. It teachas. Every bit of life teaches.

ನಾನು : ಅಂದರೆ ನಾವು ಪ್ರಯತ್ನ ಪಡದೇನೂ ನಾವು ಬರೆಯೋದ, didactic ಆಗುತ್ತೆ ಅಂತಾನಾ ?

ಮಾಸ್ತಿಯವರು : ಹೌದು. If you give a good, correct picture of life, with out your effort it teaches.

ನಾನು ; ಆದರೆ Unknowingly ಅನುಭವಗಳನ್ನು ಹೇಳುವಾಗ ಕತೆಗಾರ Selective ಆಗತಾನೆ ಅಲ್ಲವಾ ?

ಮಾಸ್ತಿಯವರು ; ಇಲ್ಲ.

ನಾನು : ಹಾಗಾದರೆ, ನೀವು ನಿಮ್ಮ ಎಲ್ಲ ಅನುಭವಾನೂ ಬರೀತೀರಾ ? ಎಲ್ಲಾ ಕಥೆಗಳಲ್ಲೂ ನಿಮಗೆ ಯಾವುದು ಇಷ್ಟ ಅಗತ್ತೆ ಅದನ್ನ ಮಾತ್ರ ಹೇಳತೀರಿ ಅಲ್ಲವಾ ?

ಮಾಸ್ತಿಯವರು : ಅಲ್ಲವಲ್ಲಾ, ಅಲ್ಲವಲ್ಲಾ, ಇಲ್ಲ. ಇಷ್ಟು ಮಾತ್ರ ಹೇಳತೇನೆ ನಾನು.

ನಾನು : ನೀವು ಕಂಡದ್ದನ್ನೆಲ್ಲ ನಿಮ್ಮ ಕತೆಗಳಲ್ಲಿ ಹೇಳಿಲ್ಲ ಅಲ್ಲವೇ

ಮಾಸ್ತಿಯವರು : ಆದಷ್ಟು ಹೇಳಿದ್ದೇನೆ. Much of what I wished to

say I have said in my stories and poems or in the comments in the magazine I was editing.

ನಾನು : ಹಾಗಾದರೆ Artಗೆ didactic ಆಗದೇ ಇರೋದು ಹೇಗೆ ಸಾಧ್ಯವಾಗುತ್ತೆ ?

ಮಾಸ್ತಿಯವರು : ಸಾಧ್ಯವೇ ಇಲ್ಲ.

ನಾನು : Didactic ಆಗಲೇ ಬೇಕಾಗುತ್ತೆ

ಮಾಸ್ತಿಯವರು : Not consciously.

ನಾನು : ಆದರೆ ನೀವು ಅನುಭವಾನ select ಮಾಡಿಕೊಂಡು didactic ಆಗಿಬಿಟ್ಟರೆ may be, mislead ಮಾಡಿದ ಹಾಗಾಗುತ್ತೇನೋ...

ಮಾಸ್ತಿಯವರು : ಇಲ್ಲ ಇಲ್ಲ.

ನಾನು : ಯಾಕಾಗಲ್ಲ ?

ಮಾಸ್ತಿಯವರು : If life is misleading. my writing is misleading

ನಾನು : That is an unbeatable answer.

ಮಾಸ್ತಿಯವರು : If life is misleading I can't help it.

ನಾನು : Then how do we learn from life ?

ಮಾಸ್ತಿಯವರು : See, it is not the work for one man. No. One man can't simply order for all the gamuts. I pick out the things I know. I pick out you see the things that come to my mind. I express. The other man will express what he sees So, no world can prosper with the work of one writer.

ಅಲ್ಲಿಂದ ಮುಂದಿನದು ಇನ್ನೊಂದು ಕತೆ. ಪ್ರೀತಿ ವಿಶ್ವಾಸಗಳ, ಊಟ ಉಪಚಾರಗಳ ಕತೆ. ತನ್ನ ದೊಡ್ಡತನದಿಂದ, ಒಳಗಿನಿಂದ ಹುಟ್ಟಿಬಂದ ಸೌಜನ್ಯದ ಮೂಲಕ ಕ್ಷಣ ಕ್ಷಣಕ್ಕೂ ನಮ್ಮ ಸಣ್ಣತನ, ಚಿಲ್ಲರೆ ಗರ್ವಗಳನ್ನು ಬಾಯಿ ಬಿಟ್ಟು ಹೇಳದೆ ನಮ್ಮ ಮುಖಕ್ಕೆ ತೋರಿಸುವ ವರ್ತನೆ. ದೊಡ್ಡ ಜೀವ ಹೇಗೆ ಬದುಕಬೇಕೆಂದು ಹೇಳಿ ತೋರಿಸುವುದಿಲ್ಲ, ಬಾಳಿ ತೋರಿಸುತ್ತದೆ. ಅವರದು ಅಂತಹ ಬಾಳು. ಅದನ್ನು ಸ್ವಲ್ಪ ಹತ್ತಿರದಿಂದ ನೋಡಿದ, ಅವರ ಕೆಲವು ವಿಚಾರಗಳನ್ನು ನಮಗೆ ಮತ್ತು ನಿಮಗೆ ಮತ್ತೊಮ್ಮೆ ಅನಾವರಣ ಮಾಡಿದ ಸಮಾಧಾನ ನಮ್ಮದು. ಆತ್ಮೀಯವಾದ ಒಲವು ತುಂಬಿದ ವಿದಾಯ ಪಡೆದು ಹೊರಗೆ ಬಂದಾಗ, ಜಿನುಗು ಮಳೆ ಮಾಯವಾಗಿ ಬಿಸಿಲು ಕಾಯುತ್ತಿತ್ತು. ಮಾಸ್ತಿಯವರು ಬದುಕುತ್ತಿರುವ, ಚಿಂತಿಸುತ್ತಿರುವ ಎತ್ತರಕ್ಕೂ ನಮ್ಮ ಸುತ್ತಲಿನ ಕಟುವಾಸ್ತವತೆಗೂ ಇರುವ ಅಂತರ ಕಣ್ಣು ಮತ್ತು ಮನಸ್ಸುಗಳ ತುಂಬಾ ಇತ್ತು. ●

# ಮಾಸ್ತಿಯವರ ಜೊತೆ ಮಾತುಕತೆ

ಡಾ॥ ಬಿ. ಸಿ. ರಾಮಚಂದ್ರಶರ್ಮ

ನಮಸ್ಕಾರ, ಡಾ॥ ಮಾಸ್ತಿಯವರೆ. ಇದೊಂದು ಉತ್ಸವದ ಸಂದರ್ಭ. ನಮ್ಮ ನಾಡಿನ ಅತ್ಯುನ್ನತ ಸಾಹಿತ್ಯಕ ಪ್ರಶಸ್ತಿಯಾದ ಜ್ಞಾನಪೀಠ ಪ್ರಶಸ್ತಿ ನಿಮಗೆ ಸಿಕ್ಕಿದೆ. ನಮ್ಮ ದೇಶದ ಸಾಹಿತ್ಯವನ್ನು ಬೇರೆ ಬೇರೆ ಭಾಷೆಗಳಲ್ಲಿ ಬರೆಯುವದರ ಮೂಲಕ ಸಂಪದ್ಭರಿತವಾಗುವಂತೆ ಮಾಡಿದ ಶ್ರೇಷ್ಠರ ಗುಂಪಿಗೆ ನೀವೂ ಬಂದಿರಿ. ಹದಿನೈದು ನಿಮಿಷಗಳ ಸಂಕ್ಷಿಪ್ತ ಅವಧಿಯಲ್ಲಿ ನಿಮ್ಮೆಲ್ಲ ಸಾಧನೆಗಳನ್ನು ಸೆರೆ ಹಿಡಿಯುವುದು ಆಗದೊಂದು ಕೆಲಸ. ಇಡೀ ಒಂದು ಶತಮಾನವನ್ನು ಹದಿನೈದು ನಿಮಿಷಗಳಲ್ಲಿ ಹಿಡಿಯುವುದು ಹೇಗೆ ತಾನೇ ಸಾಧ್ಯ ? ಆದರೂ, ಇದನ್ನು ಕೇಳುತ್ತಿರ ಬಹುದಾದ ಹೊರನಾಡಿನವರಿಗೆ ನಿಮ್ಮ ವಿವಿಧ ಕಾರ್ಯಕ್ಷೇತ್ರಗಳ ಬಗೆಗೆ, ನಿಮ್ಮ ಅತಿ ಮುಖ್ಯ ಸಾಧನೆಗಳ ಬಗ್ಗೆ, ಮಾಹಿತಿ ಕೊಡುವುದು ನನ್ನ ಕರ್ತವ್ಯ.

ಮೊದಲಿಗೇ ಹೇಳಬೇಕಾದ್ದು : 93 ವರ್ಷಗಳವರೆಗೆ ನೀವು ಬದುಕಿರುವುದೇ ಒಂದು ಸಾದನೆ. ದೊಡ್ಡದಾದ್ದು...

ಮಾಸ್ತಿ : ಅದರಲ್ಲಿ ನನ್ನದೇನಿದೆ ? ದೇವರು ಕೊಟ್ಟ ಅಯುಸ್ಸು...

ಶರ್ಮ : 115ಕ್ಕೂ ಹೆಚ್ಚು ಗ್ರಂಥಗಳನ್ನು ಬರೆದಿದ್ದೀರಿ. ಇಂಗ್ಲಿಷಿನಲ್ಲಿ, ಕನ್ನಡದಲ್ಲಿ. ಸಣ್ಣ ಕತೆಯೆನ್ನುವ ಸಾಹಿತ್ಯ ಪ್ರಕಾರದಲ್ಲಿ ಜಾದು ಮಾಡಿಕೊಟ್ಟಿರಿ. ಕಾವ್ಯದಲ್ಲಿ ಉತ್ಕೃಷ್ಟವಾದ ಕೆಲಸ ಮಾಡಿದ್ದೀರಿ— ಆದರಲ್ಲೂ, ಭಾಷೆಯನ್ನು ಉಪಯೋಗಿಸುವ ದಿಕ್ಕಿನಲ್ಲಿ ನೀವು ಸಾಧಿಸಿರುವುದು ಒಂದು ದೊಡ್ಡ ಕೊಡುಗೆ. ಮೈಸೂರು ಸಂಸ್ಥಾನವಿದ್ದ ಕಾಲದಲ್ಲಿ ನೀವು ಉನ್ನತ ಅಧಿಕಾರದಲ್ಲಿದ್ದಿರಿ. ನನಗೆ ಎಂದೂ ಇದೊಂದು ಕುತೂಹಲದ ವಿಷಯವಾಗಿದೆ. ಸರ್ಕಾರದ ಉನ್ನತ ಅಧಿಕಾರಿಯಾಗಿದ್ದ ನೀವು ಸಾಹಿತ್ಯರಚನೆಯಲ್ಲಿ ತೊಡಗಿಸಿಕೊಳ್ಳುವುದು ಹೇಗೆ ತಾನೇ ಸಾಧ್ಯವಾಯಿತು ? ನಿಮ್ಮ ಸಾಹಿತ್ಯರಚನೆಯ ಆರಂಭದ ದಿನಗಳ ಬಗ್ಗೆ ನೆನಪು ಮಾಡಿಕೊಡುತ್ತೀರ ?

ಮಾಸ್ತಿ : ನಾನು ಹುಟ್ಟು ಬರಹಗಾರ, ಹೌದು. ಸರ್ಕಾರದ ಕೆಲಸ ನನ್ನ ಪಾಲಿಗೆ ಬಂದದ್ದು ಆಮೇಲೆ. ಹುಟ್ಟು ಬರಹಗಾರ ಆಗ ಸರ್ಕಾರದ ಕೆಲಸಕ್ಕೆ ಬಂದ.

ಶರ್ಮ : ನಿಮ್ಮ ಮಾತು ನಿಜವೆನ್ನಿಸುತ್ತದೆ. ಹದಿನೈವರ ವಯಸ್ಸಿಗೇ

ನೀವೊಂದು ದೊಡ್ಡ ಕಾದಂಬರಿಯನ್ನು ಬರೆದದ್ದು ದಾಖಲೆಯಾಗಿದೆ. ಅದರ ತರುಣದಲ್ಲೇ ಕವನಗಳನ್ನು ಬರೆಯತೊಡಗಿದಿರಿ. ಅದೂ ಗೊತ್ತು. ಆದರೂ, ಬರೆಯುವುದನ್ನು ನೀವು ಮೊದಲು ಕಂಡು ಕೊಂಡಿದ್ದು ಯಾವಾಗ? ನೆನಪಾಗದೇ?

ಮಾಸ್ತಿ : ಯಾವಾಗ ಬರೆಯುವ ಆಸೆ ನನ್ನಲ್ಲಿ ಕಾಣಿಸಿಕೊಂಡಿತು ಅನ್ನುವುದನ್ನು ನಿರ್ದಿಷ್ಟವಾಗಿ ಹೇಳುವುದು ಕಷ್ಟ. ಚಿಕ್ಕಂದಿನಲ್ಲೇ ಇತ್ತು ಅನ್ನುವಷ್ಟೇ ಗೊತ್ತು. ಹೈಸ್ಕೂಲಿನ ಮೊದಲ ವರ್ಷಗಳಲ್ಲೇ ನಾನು ಇಂಗ್ಲಿಷಿನಲ್ಲಿ ಪದ್ಯರಚನೆ ಮಾಡುತ್ತಿದ್ದುದು ಜ್ಞಾಪಕವಿದೆ. ಇಂಗ್ಲಿಷಿನಲ್ಲಿ ಬರೆಯುವುದು ಸಹಜವೆನ್ನಿಸಿದ ಕಾಲ ಅದು. ಆಮೇಲೆ, ಹೈಸ್ಕೂಲಿನ ತರಗತಿಗೆ ಬಂದಾಗ "ಕೃಷ್ಣಕುಮಾರಿ" ಅನ್ನುವುದನ್ನು ಬರೆದೆ. ಸದ್ಯ, ದೇವರ ದಯ, ಅದು ಎಲ್ಲೂ ಪ್ರಕಟವಾಗಲಿಲ್ಲ. ಆಮೇಲೆ, ಇಂಗ್ಲಿಷಿನಿಂದ ನಾನು ಕೆಲವು ಕತೆಗಳನ್ನು ಅನುವಾದ ಮಾಡಿದೆ. ಅದನ್ನು ಪ್ರಕಟಿಸುವಂತೆ ಪ್ರಕಾಶಕರನ್ನು ಕೇಳಿದಾಗ ಒಬ್ಬರು ಹೇಳಿದರು : 'ಸ್ವಾಮಿ, ಎರಡು ಹೊತ್ತು ಊಟವೇ ಕಷ್ಟವಾಗಿರುವಾಗ ಯಾರು ನಿಮ್ಮ ಕತೆಗಳ ಪುಸ್ತಕವನ್ನು ಕೊಂಡುಕೊಳ್ಳುತ್ತಾರೆ, ನೀವೇ ಹೇಳಿ.'

ಆಮೇಲೆ, ಬೆಂಗಳೂರಿಗೆ ಎಫ್. ಎ. ಕ್ಲಾಸಿಗೆಂದು ಬಂದಾಗ 'ಸ್ಟ್ರ್ಯಾಂಡ್' ಪತ್ರಿಕೆಯಲ್ಲಿದ್ದ ಕತೆಗಳನ್ನೋದಿದೆ. ಸುಂದರವಾದ ಕತೆಗಳು. ನಾನೂ ಯಾಕೆ ಇಂತಹ ಕತೆಗಳನ್ನು ಬರೆಯಬಾರದು ಅಂತ ಕೇಳಿಕೊಂಡೆ, ಕೆಲವನ್ನು ಬರೆದೂ ಬಿಟ್ಟೆ. ನನ್ನ ಮೊದಲ ಕಥಾಸಂಕಲನ "ಕೆಲವು ಸಣ್ಣ ಕತೆಗಳು" 1910ರಲ್ಲಿ ಪ್ರಕಟವಾಗಿದ್ದು ಹೀಗೆ.

ಶರ್ಮ : ನಿಮಗಾಗ ಹತ್ತೊಂಬತ್ತು ವಯಸ್ಸು, ಅಲ್ಲವೇ?

ಮಾಸ್ತಿ : ಹೌದು. ಅದುವರೆಗೆ ಬರೆದಿದ್ದ ಕತೆಗಳು ಒಂದು ಕಡೆ ಸೇರಿ ನನ್ನ ಮೊದಲ ಪುಸ್ತಕ ಹೊರಬಂತು.

ಶರ್ಮ : ಸಣ್ಣ ಕತೆ ಅನ್ನಿಸಿಕೊಳ್ಳಬಹುದಾದ ಬರಹ ಕನ್ನಡದಲ್ಲಿ ಅದುವರೆಗೆ ಬಂದಿರಲಿಲ್ಲವೇ?

ಮಾಸ್ತಿ : ಇತ್ತು, ಇರಲಿಲ್ಲ, ಅನ್ನಬಹುದೇನೋ. ನಾವು ಯಾವುದನ್ನು ಸಣ್ಣ ಕತೆಯೆನ್ನಬಹುದೋ ಅದರ ಮೊದಲ ರೂಪಗಳು ಆಗಲೇ ಇದ್ದವು. ಪಂಜೆ ಮಂಗೇಶರಾಯರು ಕೆಲವನ್ನು ಬರೆದು ಪ್ರಕಟಿಸಿದ್ದರು. ಕತೆ ಅನ್ನುವುದಕ್ಕಿಂತ ಚಿತ್ರಗಳು ಅನ್ನುವಂತಹವು. ಅವನ್ನು ಕತೆಗಳು ಅಂದರೂ ತಪ್ಪಲ್ಲವೇನೋ. ಎಷ್ಟೇ ಆದರೂ, ಕತೆ ಅನ್ನುವದರ ಲಕ್ಷಣಸಿದ್ಧಾಂತವನ್ನು ಹೇಳುವುದು ಸುಲಭವಲ್ಲ.

ಶರ್ಮ : ನಿಮ್ಮ ಕತೆಗಳ ಬಗ್ಗೆ ಒಂದು ಮಾತು ಹೇಳಲೇಬೇಕು ; ಅಲ್ಲಿ ಕಾಣುವ ಜನ ನಮ್ಮ ಅಕ್ಕಪಕ್ಕದ ಮನೆಯುವರು. ನಮಗೆ ಚಿರಪರಿಚಿತರಾದವರು. ಉದಾಹರಣೆಗೆ, ಹಾಲು ಮಾರುವ ಹೆಂಗಸು ಅಥವಾ ಮೊಸರು ಮಾರುವ ಮಂಗಮ್ಮ ಅಥವಾ ಒಬ್ಬ ಅಮಲ್ದಾರ ಅಥವಾ ಎದೆ ಬಿರಿಯುವಷ್ಟು ಪ್ರೀತಿ ತುಂಬಿಕೊಂಡು ಅದಕ್ಕೆ ಸತ್ಪಾತ್ರಳಾಗುವ ಹೆಣ್ಣೊಂದನ್ನು ಹುಡುಕುವ ತರುಣ. ನಿಮ್ಮ ಕತೆಗಳಲ್ಲಿ ಇನ್ನೂ ಒಂದು ವೈಶಿಷ್ಟ್ಯವಿದೆ ; ನೀವು ಕತೆಗಳಿಗೆ ದೇವರನ್ನು ತಂದಾಗಲೂ ಅವನನ್ನು ದೇವತ್ವದ ನೆಲೆಯಲ್ಲಿ ನೋಡದೇ, ನಮಗೆ ನಿಲುಕದ ಎತ್ತರದಲ್ಲಿ ಇಡದೇ, ಮನುಷ್ಯನ ನೆಲೆಗೆ ಎಳೆದು ತಂದಿದ್ದೀರಿ. ಮನುಷ್ಯನೂ ದೇವರ ಎತ್ತರಕ್ಕೆ ಏರಬಹುದು ಅನ್ನುವುದನ್ನು ತೋರಿಸುವ ಆಸೆಯಿದ್ದಂತೆ.

ಮಾಸ್ತಿ : ನೀವಂದದ್ದು ನಿಜ. ನೀವೇ ಹೇಳಿ : ಯಾರು ತಾನೇ ದೇವರನ್ನು ಕಂಡಿದ್ದಾರೆ ?

ಶರ್ಮ : ನಿಜವೇ. ನಿಮ್ಮ ಧರ್ಮದ ಮೇಲಣ ಪುಸ್ತಕದಲ್ಲಿ ಹಾಗೂ "ಬದುಕಿನ ಬಗ್ಗೆ ಚಿಂತನೆ" ಅನ್ನುವ ಸಣ್ಣ ಪುಸ್ತಕದಲ್ಲಿ ಇದೇ ಪ್ರಶ್ನೆಯನ್ನು ಕೇಳಿದ್ದೀರಿ.

ಮಾಸ್ತಿ : ನಾವು ಒಳ್ಳೆಯ ಮನುಷ್ಯರನ್ನು ಬದುಕಿನಲ್ಲಿ ಕಂಡಾಗ ನಮಗೆ ಅವರಿಗಿಂತ ಒಳ್ಳೆಯವರಾದ ಮನುಷ್ಯನ ಚಿತ್ರ ಕಣ್ಣಿಗೆ ಬರುತ್ತದೆ. ಧರ್ಮದ ಆಚರಣೆಗೆ ಬದ್ಧರಾಗಿ, ಉದಾರಿಗಳಾಗಿ, ಬದುಕಿನ ಮೇಲೆ ಬೆಳಕು ಚೆಲ್ಲುವ ಮನುಷ್ಯರ ಚಿತ್ರ ಅದು. ಅದಕ್ಕೇ ನಮಗೆ ಪುರುಷೋತ್ತಮನ ಪರಿಕಲ್ಪನೆ ಸಾಧ್ಯವಾಗಿರುವುದು. ದೇವರೆಂದರೆ ಬೇರೇನಲ್ಲ—ನಾವು ಮನುಷ್ಯರು ಕಾಣುವ ಒಂದು ಕನಸು, ಸುಂದರ ಕನಸು.

ಶರ್ಮ : ಅಂದರೆ, ಮನುಷ್ಯ ಸಾಧಿಸಬಹುದಾದ ಔನ್ನತ್ಯದ ಅಭಿವ್ಯಕ್ತಿಯಾಗಿ ದೇವರ ಪರಿಕಲ್ಪನೆ ಇದೆಯೆಂದೇ ನೀವು ಹೇಳುತ್ತಿರುವುದು?

ಮಾಸ್ತಿ : ಅದೇ ನನ್ನ ಮಾತಿನ ಅರ್ಥ. ಮನುಷ್ಯನ ಸಾಧ್ಯತೆಯ ಪರಿಶುದ್ಧ ರೂಪವೇ ದೇವರು.

ಶರ್ಮ : ನಿಮ್ಮ ಎಲ್ಲ ಸಾಹಿತ್ಯದ ಬಗ್ಗೆ ಒಂದು ಮಾತು ಹೇಳಬಹುದೇನೋ. ಕತೆಗಳೇ ಆಗಲಿ, ಕಾವ್ಯವೇ ಆಗಲಿ, ಮಾನವನ ಇವತ್ತಿನ ಅವಸ್ಥೆಯನ್ನು ಒಪ್ಪಿಕೊಳ್ಳುವ ಒಂದು ಸಾತ್ವಿಕ ನಿಲುವು ನಿಮ್ಮದೆನ್ನುವ ಹಾಗಿದೆ... ಇನ್ನೂ ಒಂದು : ನಮ್ಮ ಬದುಕನ್ನು ಕೈಹಿಡಿದು ನಡೆಸುವ ದೇವರಿದ್ದಾನೆ ಅನ್ನುವ ಶ್ರದ್ಧೆಯಷ್ಟೇ ಗಟ್ಟಿಯಾದ ವಿಶ್ವಾಸ ಮಾನವ ಮುಟ್ಟಬಹುದಾದ ಎತ್ತರದಲ್ಲೂ ಇದೆ.

ಮಾಸ್ತಿ : ನನ್ನ ಅಂತಹ ನಂಬಿಕೆ ಅತಿ ಸಹಜವಾದದ್ದು ; ನನ್ನ ತಾತ, ನನ್ನ ತಂದೆ, ತಾಯಿ—ದೇವರನ್ನು ನೆಚ್ಚಿ ಬದುಕಿದ ಜನ. ಆ ಸಾಂಪ್ರದಾಯಿಕ ನಂಬಿಕೆಯೇ ಕಾರಣವಾಗಿ ಅವರ ಬದುಕು ಅರ್ಥಪೂರ್ಣವಾಗಿತ್ತು ; ಸುಂದರವಾಗಿತ್ತು. ಅವರು ಯಾರೂ ತತ್ವಜ್ಞಾನದ ಬಗ್ಗೆ ತಲೆ ಕೆಡಿಸಿಕೊಳಲಿಲ್ಲ. ಪ್ರಶ್ನೆ ಕೇಳಲಿಲ್ಲ. ನನ್ನ ಕಾಲಕ್ಕೆ ಪ್ರಶ್ನೆ ಕೇಳುವುದು ಬಂತಾದರೂ ನನ್ನನ್ನು ನಿಯಂತ್ರಿಸುವ ಒಂದು ಅಗೋಚರ ಶಕ್ತಿ ನನ್ನೊಳಗಿದೆ ಅನ್ನುವ ನಿಲುವಿಗೆ ಬಂದಿದ್ದೇನೆ. ಆ ಶಕ್ತಿಯ ಅರಿವಿಲ್ಲದ ಗಳಿಗೆಯೇ ಇಲ್ಲ. ನನಗೆ ಹತ್ತಿರವಾದ, ಆತ್ಮೀಯವಾದ ಶಕ್ತಿ ಅದು.

ಶರ್ಮ : ನಿಮ್ಮ ಸಾಹಿತ್ಯವನ್ನು ಓದಿದಾಗ ಕಣ್ಣಿಗೆ ಕಟ್ಟುವುದೆಂದರೆ ನಿಮ್ಮ ತಾತ್ವಿಕ ನಿಲುವಿನ ಸಹಜತೆ. ನಿಮ್ಮ ಕತೆಗಳಲ್ಲಿ ದೊಡ್ಡ ಗುಣವೆಂದರೆ ಇದೇ, ನೇರವಾಗಿ ಹೇಳದೇ ಬದುಕನ್ನು ಹಸನಾಗಿಸುವ ಮೌಲ್ಯಗಳನ್ನು ಸೂಚಿಸುವ ನಿಮ್ಮ ಕ್ರಮ.

ಮಾಸ್ತಿ : ನಾನು ಪ್ರಬುದ್ಧನಾದ ಮೇಲಿನ 75 ವರ್ಷಗಳಲ್ಲಿ ಕಂಡುಕೊಂಡದ್ದರ ಆಧಾರದ ಮೇಲೆ ಹೇಳುವುದಿಷ್ಟು : ದೇವರನ್ನು ನಂಬಿ ಬದುಕಿ. ಅವನಿಗೆಂದೂ ಮೋಸ ಮಾಡುವ ಯೋಚನೆ ಮಾಡಬೇಡಿ. ಅವನ ಕಣ್ಣು ಸದಾ ನಿಮ್ಮ ಮೇಲಿದೆ. ಅವನು ಕಾಪಾಡುತ್ತಾನೆ. ನನ್ನನ್ನು ಹೇಗೋ ಹಾಗೆ ಪ್ರಪಂಚದ ಅಷ್ಟೂ ಮಿಲಿಯನ್ ಮಿಲಿಯನ್ ಜನರನ್ನೂ ಕಾಪಾಡುತ್ತಾನೆ. ಸೇಂಟ್ ಅಗಸ್ಟೀನ್ ಹೇಳಿದ್ದೂ ಇದೇ: ಸೃಷ್ಟಿಯ ಒಂದಂಶವಾಗಿ ಮನುಷ್ಯನನ್ನು ಸೃಷ್ಟಿಸಿದ ದೇವರು ಮನುಷ್ಯನನ್ನು ಕಾಪಾಡದೇ ಹೋಗುವ ಪ್ರಶ್ನೆಯೇ ಇಲ್ಲ.

ಶರ್ಮ : ನೀವು ಇದುವರೆಗೆ ಹೇಳಿದ್ದನ್ನು ನಿಮ್ಮ ಸಾಹಿತ್ಯಕ್ಕೆ ಅನ್ವಯಿಸಬಹುದೇನೋ. ನೀವೊಂದು ಕತೆ ಹೇಳಿದ್ದೀರಿ : ಬದುಕು ಎಂದೂ ಸಂಪೂರ್ಣವಾಗಿ ತನ್ನ ನಿಗೂಢತೆಯನ್ನು ಬಿಟ್ಟುಕೊಡುವುದಿಲ್ಲ. ಬದುಕಿರುವುದು ಬದುಕಲಿಕ್ಕೇ ಹೊರತು ಅದನ್ನು ಅರ್ಥ ಮಾಡಿಕೊಳ್ಳುವದಕ್ಕಲ್ಲ...ನನ್ನ ಪ್ರಶ್ನೆ ಇದು : ಬದುಕನ್ನು ಅರ್ಥ ಮಾಡಿಕೊಳ್ಳುವ ಒಂದು ಪ್ರಯತ್ನವೇ ಬರಹ ?

ಮಾಸ್ತಿ : ಅಲ್ಲ. ಬದುಕನ್ನು ಅರ್ಥ ಮಾಡಿಕೊಳ್ಳುವದಕ್ಕಲ್ಲ. ಬದುಕುವದಕ್ಕೆ. ಸಮಷ್ಟಿಯ ಬದುಕಲ್ಲಿ ಪಾಲುಗೊಳ್ಳುವುದಕ್ಕೆ....

ಶರ್ಮ : ಅದರಲ್ಲಿ ನೈತಿಕ ಮೌಲ್ಯಮಾಪನದ ಅಂಶವೇ ಇಲ್ಲವೇ ಹಾಗಾದರೆ ?

ಮಾಸ್ತಿ : ಮೌಲ್ಯಗಳ ಪ್ರಶ್ನೆ ಅಷ್ಟೊಂದು ಮುಖ್ಯವಲ್ಲ.

ಶರ್ಮ : ಇನ್ನೊಂದು ಮಾತು : ನಿಮ್ಮ ಕತೆ ಕಾದಂಬರಿಗಳಿಗೆ ಸಂಬಂಧಿ
ಹಾಗೆ. ಹಲವು ಕಡೆಗಳಲ್ಲಿ ಮನುಷ್ಯನ ದೌಷ್ಟ್ಯದ ಚಿತ್ರಣವಿ
ಆದರೆ, ನೀವು ಅದನ್ನಾಗಲೀ ಅಂತಹ ದುಷ್ಟ ಜನರನ್ನಾಗಲೀ
ಖಂಡಿಸಿದ್ದು ಕಾಣುವುದಿಲ್ಲ...

ಮಾಸ್ತಿ : ನನ್ನಲ್ಲೇ ದೌಷ್ಟ್ಯವಿರುವುದು ನನಗೆ ಮನವರಿಕೆಯಾಗಿದೆ. ಹಾಗಿರುವಾ
ಅದನ್ನು ಹೇಗೆ ತಾನೇ ಖಂಡಿಸಲಿ ?

ಶರ್ಮ : ತಪ್ಪು ಮಾಡುವವರ ಬಗ್ಗೆ ನೀವು ನಿಮ್ಮ ಬರಹದಲ್ಲಿ ಸಾಮಾನ್ಯವಾ
ತೋರಿಸುವ ಅನುಕಂಪದ ಮೂಲ ನಿಮ್ಮ ಈ ಆತ್ಮಜ್ಞಾನದಲ್ಲಿ
ಅನ್ನಬಹುದೇನೋ.. ತಪ್ಪು ಮಾಡಿದವನಿಗೆ ಶಿಕ್ಷೆ ವಿಧಿಸಿದ ಸಂದರ್ಭ
ಗಳು ನಿಮ್ಮ ಕಥಾ ಸಾಹಿತ್ಯದಲ್ಲಿ ಕಂಡು ಬರುವುದು ಕಡಿಮೆ
ಅವರನ್ನು ನೀವು ತಂದೆಯೋ ಅನ್ನುವ ಹಾಗೆ....

ಮಾಸ್ತಿ : ಶಿಕ್ಷೆ ವಿಧಿಸುವದಕ್ಕೆ ನಾವು ಯಾರು ? ಅಂಥವರನ್ನು ಅರ್ಥ ಮಾ
ಮಾಡಿಕೊಳ್ಳುವದಷ್ಟೇ ನಾವು ಮಾಡಬಹುದಾದ್ದು. ಅವರ ಬ
ಕನಿಕರವಿರಲಿ. ಅವರನ್ನು ಮಂದಾಸನದ ಮೇಲೆ ಕೂರಿಸಬಾರ
ಹಾಗೇ ಅವರನ್ನು ಖಂಡಿಸಲೂ ಬಾರದು. ಖಂಡಿಸುವಾಗ ನಾ
ನಮ್ಮನ್ನು ಮಂದಾಸನದ ಮೇಲೆ ಕೂರಿಸುತ್ತಿದ್ದೇವೆ, ಅಲ್ಲವೆ
ನಮಗೆ ಅಂಥ ಅಧಿಕಾರ ಕೊಟ್ಟವರು ಯಾರು ?

ಶರ್ಮ : ನಿಮ್ಮ ಜೀವನ ದರ್ಶನದ ಬಗ್ಗೆ ಕೊನೆಗೊಂದು ಪ್ರಶ್ನೆ : ಮನು
ನನ್ನು ಕೆಳಕ್ಕೆಳೆಯುವ ಶಕ್ತಿಗಳು ಸದಾ ಕಾಲಕ್ಕೂ ಇರುವಂತೆಯೆ
ಮೇಲಕ್ಕೆತ್ತುವ ಕೆಲವು ಶಕ್ತಿಗಳು ಇವೆ ಅಂತ ನೀವೇ ಒಂದು ಕ
ಹೇಳಿದ ನೆನಪಿದೆ. ಹಾಗಾದರೆ, ಈ ಎರಡು ವಿರುದ್ಧ ಸೆಳೆತ
ನಡುವಿನ ಕರ್ಷಣೆಯೇ ಬದುಕೆನ್ನಬಹುದೇ ? ಮನುಷ್ಯ ಜೀವನ
ಹಿಂದೆ ಕಪ್ಪು ನೆರಳಾಗಿ ಈ 'ಈವಿಲ್' ಇದ್ದೇ ಇರುತ್ತದೆಯೆನ್ನುವ
ನಿಮ್ಮ ನಂಬಿಕೆ ?

ಮಾಸ್ತಿ : ಹೌದು, ಅದು ಮನುಷ್ಯನ ಜೀವನದ ಒಂದು ಅನಿವಾರ್ಯ ಅಂಶವಾ
ಎಂದೂ ಇರುತ್ತದೆ, ನಮ್ಮ ಪೂರ್ವಜನರಿಗೆ ಈ ಸತ್ಯ ಮನವ
ಯಾಗಿತ್ತು. ಎಂದೇ ಅವರು ದೇವ ದಾನವರ ನಡುವೆ ನಡೆಯು
ಯುದ್ಧದ ಮಾತಾಡಿದ್ದು. ಈ ದ್ವಂದ್ವ ಶಾಶ್ವತವೆನ್ನುವುದ
ಅವರಿಗೆ ಗೊತ್ತಿತ್ತು.

ಶರ್ಮ : ನಿಮಗೆ ಜ್ಞಾನಪೀಠ ಪ್ರಶಸ್ತಿಯನ್ನು ತಂದುಕೊಟ್ಟ ನಿಮ್ಮ ಕಾದಂಬ
"ಚಿಕವೀರ ರಾಜೇಂದ್ರ"ವನ್ನು ಮನಸ್ಸಿನಲ್ಲಿಟ್ಟು ಕೊಂಡು ನಾ
ಒಳಿತು-ಕೆಡಕುಗಳ ಬಗ್ಗೆ ನಿಮ್ಮನ್ನು ಇದುವರೆಗೂ ಕೇಳಿದ್ದು. ನ

ದೃಷ್ಟಿಯಲ್ಲಿ ಆ ಕಾದಂಬರಿಯಲ್ಲಿ ನಿಮ್ಮ ವಿಚಾರ ಹರಳಾಗಿದೆ, ಚಿಕವೀರ ರಾಜೇಂದ್ರ ಕೆಡುಕ ಅನ್ನುವದಕ್ಕಿಂತಲೂ ದುರ್ಬಲನಾದ ಒಬ್ಬ ವ್ಯಕ್ತಿ ಅನ್ನಿಸುವ ಹಾಗೆ ಮಾಡಿದ್ದೀರಿ. ಕೆಡುಕಿನ ಮೂಲ ದೌರ್ಬಲ್ಯವಲ್ಲವೇ ?

ಮಾಸ್ತಿ : ನಿಜ, ನಿಜ. ಅವನೊಬ್ಬ ಕನಿಕರಕ್ಕೆ ಪಾತ್ರನಾಗುವ ವ್ಯಕ್ತಿ.

ಶರ್ಮ : ಮತ್ತೆ, ನಿಮ್ಮ ಕಾದಂಬರಿಯಲ್ಲಿ ಒಳ್ಳೆಯವರು ಇದ್ದಾರೆ. ಉದಾಹರಣೆಗೆ, ಬೋಪಣ್ಣ, ಗೌರಮ್ಮ. ತಮ್ಮ ಒಳ್ಳೆಯತನಕ್ಕೆ ಇರಬಹುದಾದ ಪ್ರಚಂಡ ಶಕ್ತಿಯನ್ನು ತಿಳಿಯದೇ ಹೋದ ದುರ್ಬಲ ಒಳ್ಳೆಯವರು. ಅವರೆದುರಿಗೆ ಚಿಕವೀರ ದುರ್ಬಲನಾದರೂ ಅಧಿಕಾರದ ಮದ ಅವನಿಗೆ.....

ಮಾಸ್ತಿ : ದೈವದ ಅಭಿವ್ಯಕ್ತಿಗೆ ಒಳ್ಳೆಯವರೇ ಆಗಬೇಕಾಗಿಲ್ಲ. ಚಿಕವೀರನ ಮೂಲಕವೂ ಅದು ನುಡಿಯಬಹುದಲ್ಲವೇ ? ಸಂತರೇ ಬೇಕಿಲ್ಲ ಅದರ ಅಭಿವ್ಯಕ್ತಿಗೆ.

ಶರ್ಮ : ಏಟ್ಸ್ ಕವಿಯ "Things fall apart, the centre cannot hold" ಅನ್ನುವುದಕ್ಕೆ ಸೊಗಸಾದ ನಿದರ್ಶನ ಚಿಕವೀರ ರಾಜೇಂದ್ರ. ಆ ಸಾಲುಗಳನ್ನು ನೀವೆ ಉದ್ಧರಿಸ್ದೀರಿ, ಅಲ್ಲವೇ ?

ಮಾಸ್ತಿ : ಇವೊತ್ತು ಪಂಜಾಬಿನಲ್ಲಿ ಆಗುತ್ತಿರುವುದು ಅದಕ್ಕೆ ನಿದರ್ಶನ ತಾನೆ ? ಕೇಂದ್ರದ ಶಕ್ತಿ ಕ್ಷೀಣವಾದಾಗ ಎಲ್ಲ ಛಿದ್ರವಾಗುವುದು ಅನಿವಾರ್ಯ.

ಶರ್ಮ : ಇವೊತ್ತಿನ ಸನ್ನಿವೇಶವನ್ನು ಗಮನದಲ್ಲಿಟ್ಟಕೊಂಡು ಕಾದಂಬರಿಯಗ್ನು ಬರೆದಿರ ? ಇವೊತ್ತಿನ ಸಮಾಜಕ್ಕೆ ಒಂದು ನೀತಿ ಪಾಠವನ್ನು ಕಲಿಸುವುದು ನಿಮ್ಮ ಉದ್ದೇಶಗಳಲ್ಲಿ ಒಂದಾಗಿರ ಬಹುದೇ ?

ಮಾಸ್ತಿ : ನನಗೆ ಬುದ್ಧಿ ಹೇಳುವ ಉದ್ದೇಶವಿಲ್ಲ, ಬದುಕಿನ ಚಿತ್ರ ಕೊಡು ವುದೊಂದೇ ನಾನು ಮಾಡಬೇಕಾದ ಕೆಲಸ. ನಾನು ಕೊಟ್ಟ ಚಿತ್ರ ದಿಂದ ಪಾಠ ಕಲಿಯುವುದು ಬಿಡುವುದು ಸಮಾಜಕ್ಕೆ ಸೇರಿದ್ದು. ನಾನು ಬರೆದದ್ದು ಚೆನ್ನಾಗಿದ್ದರೆ ಜನಕ್ಕೆ ಆ ಪಾಠ ಅವರಿಗೆ ಗೊತ್ತಿಲ್ಲದ ಹಾಗೇ ದಕ್ಕುತ್ತದೆ.

ಶರ್ಮ : ಮಾಸ್ತಿಯವರೆ, 94ರ ವಯಸ್ಸಿಗೆ ಬಂದಿರುವ ನಿಮ್ಮ ಇವೊತಿನ ಸಾಹಿತ್ಕಕ ಯೋಜನೆಗಳೇನು ?

ಮಾಸ್ತಿ : 94ಕ್ಕೆ ಬಂದ ನನಗೆ ಪ್ಲಾನುಗಳನ್ನು ಹಾಕುವ ಧೈರ್ಯ ಸಹಜವೇ, ನೀವೆ ಹೇಳಿ....ಈಗ್ಗೆ ಎರಡು ತಿಂಗಳ ಹಿಂದೆ ಹತ್ತು ಕತೆಗಳನ್ನು ಬರೆವೆ. "ಕನ್ನಡ ಪ್ರಭ"ದಲ್ಲಿ ಅಚ್ಚಾಗುತ್ತೆ. ವಾರಕ್ಕೊಂದರ ಹಾಗೆ ಬರದೆ. ಜೊತೆಗೊಂದು, ಸಣ್ಣ ನಾಟಕ.....

ಶರ್ಮ : ಇವೊತ್ತಿನ ಕನ್ನಡ ಸಾಹಿತ್ಯ ಹಿಡಿದಿರುವ ದಾರಿಯ ಬಗ್ಗೆ ಅಧಿಕೃತವಾಗಿ ಮಾತಾಡಬಲ್ಲ ಕೆಲವೇ ಮಂದಿಯಲ್ಲಿ ನೀವೊಬ್ಬರು. ಈಚಿನ ವರ್ಷಗಳ ಸಾಹಿತ್ಯವನ್ನು ಸಿಂಹಾವಲೋಕನ ಮಾಡಿದಾಗ ನಿಮಗೇನನ್ನಿಸುತ್ತೆ ?

ಮಾಸ್ತಿ : ಈ ಹತ್ತು ವರ್ಷಗಳಲ್ಲಿ ನಾನು ಓದಿರುವುದು ಬಲು ಕಡಿಮೆ, ಏನು ತಾನೇ ಹೇಳಲಿ? ಆದರೂ, ಒಂದು ಹೇಳಬಹುದು. ಇವೊತ್ತು ಸಾಹಿತಿಗಳು ತಮ್ಮ ಡೀಸೆನ್ಸಿಯನ್ನು ಕಳೆದುಕೊಂಡ ಹಾಗಿದೆ, ಔಚಿತ್ಯಜ್ಞಾನ ಕಡಿಮೆಯಾಗಿದೆ, ನಮ್ಮ ಪರಂಪರೆಯ ಪ್ರಧಾನ ಗುಣವಾದ ಡೀಸೆನ್ಸಿಯನ್ನೇ ನಾವು ಮರೆತು ಎಂಥ ಸಾಹಿತ್ಯ ಬರೆಯಬಹುದು ? ಅಸುಂದರವಾದದ್ದರ ಕಡೇಗೇ ಸಾಹಿತಿಗಳ ಗಮನ ಸದಾ ಹರಿಯುತ್ತಿರುವ ಹಾಗಿದೆ.

ಶರ್ಮ : ನಿಮ್ಮ ಸಾಹಿತ್ಯರಚನೆಯ ಬಗ್ಗೆ ಮಾತಾಡುವಾಗ ನಾನು ಬದುಕಿನ ಚಿತ್ರ ಕೊಡುತ್ತೇನೆ ಅಂದಿರಿ. ನಮ್ಮ ಬದುಕು ಇವೊತ್ತು ಅಸುಂದರವಾಗಿದ್ದು, ಬದುಕಲ್ಲಿ ಡೀಸೆನ್ಸಿ ಕಾಣದಾದಾಗ ಸಾಹಿತಿಗಳು ಅದನ್ನು ಇರುವ ಹಾಗೇ ಚಿತ್ರಿಸಿದರೆ ತಪ್ಪೆ ?

ಮಾಸ್ತಿ : ಬೀದಿಯಲ್ಲಿ ಹೋಗುವ ಜನ ಮಾತನಾಡಿದ್ದೆಲ್ಲ ಹಾಗೇ ಬರೆದರೆ ಸಾಹಿತ್ಯವಾಗುವುದಿಲ್ಲ. ಹಾಗೇ, ಮಲಗುವ ಕೋಣೆಯಲ್ಲಿ ಹೆಂಗಸು ತನ್ನ ಗಂಡನಿಗೆ ಹೇಳಿದ್ದನ್ನು, ಅವರ ಸಂಭೋಗವನ್ನು ಚಿತ್ರಿಸುವುದು ಸಾಹಿತ್ಯವಾಗುವುದಿಲ್ಲ. ನಮ್ಮ ಸಾಹಿತಿಗಳು ಇವೊತ್ತು ಇಂತಹದನ್ನೆಲ್ಲ ಜನಕ್ಕೆ ಮಾರುತಾರೆ. ತಪ್ಪು, ತಪ್ಪು.

ಶರ್ಮ : ಇರಲಿ. ಇನ್ನೊಂದು ಪ್ರಶ್ನೆ : ಸಮಾಜದ ಬದುಕಿಗೆ ಸಂಬಧಿಸಿದ ಹಾಗೆ ಸಾಹಿತ್ಯದ ಪಾತ್ರವೇನು ?

ಮಾಸ್ತಿ : ತತ್ವಶಾಸ್ತ್ರಕ್ಕ ಮತಧರ್ಮಕ್ಕೆ ಇರುವ ಪಾತ್ರವೇ ಸಾಹಿತ್ಯದ್ದು ಕೂಡ. ಮನುಷ್ಯನನ್ನು ಅವನ ಸದ್ಯದ ನೆಲೆಯಿಂದ ಹೆಚ್ಚಿನ ಎತ್ತರದ ಒಂದು ನೆಲೆಗೆ ಎತ್ತುವುದು ಅದು ಮಾಡಬೇಕಾದ ಕೆಲಸ. ಬದುಕಲ್ಲಿ ಯಾವುದು ಸುಂದರ ಯಾವುದು ಅಸುಂದರ, ಯಾವುದು ಉನ್ನತ ಯಾವುದು ಕ್ಷುದ್ರ ಅನ್ನುವುದನ್ನು ಜನಕ್ಕೆ ಮನವರಿಕೆ ಮಾಡಿಕೊಡುವುದೇ ಸಾಹಿತ್ಯ. ತತ್ವಜ್ಞಾನ ಅಥವಾ ಮತಧರ್ಮ ಮಾಡಲಾರದ್ದನ್ನು ಸಾಹಿತ್ಯ ಮಾಡುತ್ತೆ : ಅವನಿಗೆ ಸಂಸ್ಕಾರ ಕೊಡುತ್ತೆ. ಅವನು ಉತ್ತಮನಾಗುವ ದಾರಿ ತೋರಿಸಿಕೊಡುತ್ತೆ.

ಶರ್ಮ : ಸಾಹಿತ್ಯಕ್ಕೆ ಹಾಗಾದರೆ ಸಾಮಾಜಿಕವಾದೊಂದು ಆಯಾಮವಿದೆ

ಅಂತಲೇ ನೀವು ಹೇಳುತ್ತಿರುವುದು? ಮನುಷ್ಯನ ಉದ್ಧಾರ ಸಾಹಿತ್ಯದ ಗುರಿಯಾಗಬಹುದೇ ?

ಮಾಸ್ತಿ : ಸಾಹಿತ್ಯ ಮನುಷ್ಯನನ್ನು ಉದ್ಧಾರ ಮಾಡೇ ಮಾಡುತ್ತೇ. ಇವೊತ್ತಲ್ಲ ದಿದ್ದರೂ ಮುಂದೆ.

ಶರ್ಮ : ನಿಮ್ಮ ಮುಖದಲ್ಲಿ ನಗು ಕುಣಿಯದ ದಿನವಿಲ್ಲ. ನೀವು ಆಶಾವಾದಿ. ಎಂದೇ ಮನುಷ್ಯನ ಭವಿಷ್ಯದಲ್ಲಿ ನಿಮಗೆ ನಂಬಿಕೆ....

ಮಾಸ್ತಿ : ನಾನು ಆಶಾವಾದಿ, ಹೌದು ಯಾಕೆ ಗೊತ್ತೆ ? ಮನುಷ್ಯನನ್ನು ಕಾಪಾಡುವ ದೇವರಿದ್ದಾನೆ, ಅವನಿರುವತನಕ ಮನುಷ್ಯ ಉಜ್ವಲ ವಾದೊಂದು ಭವಿಷ್ಯದ ಕಡೆಗೆ ಹೋಗುವುದು ಖಂಡಿತ.

ಶರ್ಮ : ನಿಮ್ಮ ಈ ದೇವರಲ್ಲಿನ ನಂಬಿಕೆ, ಪ್ರಶ್ನೆ ಕೇಳದಷ್ಟು ಅಚಲವಾದ ಶ್ರದ್ಧೆ, ಎಲ್ಲರಿಗೂ ಸಾಧ್ಯವೇ ? ನನಗೆ, ನನ್ನಂತಹ ಕೆಲವರಿಗೆ ಅದು ಸಾಧ್ಯವಾಗಿಲ್ಲವಲ್ಲ ?

ಮಾಸ್ತಿ : ನಿಮ್ಮನ್ನು ಹಾಗೆ ಮಾತಾಡುವಂತೆ ಮಾಡುತಿರುವುದು ಯಾರು ಗೊತ್ತೆ? ದೇವರು. ನಿಮ್ಮನ್ನು ಪರೀಕ್ಷೆ ಮಾಡುತ್ತಿದ್ದಾನೆ... ನೋಡಿ, ಈ ಸೃಷ್ಟಿಯ ಮೆಲ್ವಿಚಾರಣೆಗೆ ಒಂದು ಶಕ್ತಿ ಇರುವುದು ಸುಳ್ಳಲ್ಲ. ದೇವರ ಅವತಾರವೆಂದು ಜನ ನಂಬಿರುವ ಕೃಷ್ಣ ಭಗವದ್ಗೀತೆಯಲ್ಲಿ ಹೇಳಿದನ್ನು ನಿಮಗೆ ಜ್ಞಾಪಿಸಿಕೊಡಲೇ ? ಯದಾ ಯದಾಹಿ ಧರ್ಮಸ್ಯ ಗ್ಲಾನಿರ್ಭತಿ ಭಾರತ ಅಭ್ಯುತ್ಥಾನಮಧರ್ಮಸ್ಯ ತದಾತ್ಮಾನಾಂ ಸೃಜಾ ಮ್ಯಹಂ, ಅವನ ಉದ್ದೇಶವೇ ಮನುಷ್ಯನನ್ನು ಬೆಳಕಿನ ಕಡೆಗೆ ಕರೆದೊಯ್ಯುವುದು. ಕೈ ಹಿಡಿದು ನಡೆಸುವುದು...

ಶರ್ಮ : ಮಾಸ್ತಿಯವರೆ, ನಮ್ಮ ಸಂಸ್ಕೃತಿ, ನಮ್ಮ ಪರಂಪರೆ ಎಂಥ ಅಧ್ಭುತವಾದದ್ದನ್ನು ಸೃಷ್ಟಿಸಬಲ್ಲದು ಅನ್ನುವದರ ನಿದರ್ಶನದಂತೆ ನೀವಿದ್ದೀರಿ. ಬದುಕು ಬರೆಹ ಬೇರೆಯಲ್ಲ, ಒಂದೆ ಧರ್ಮದ ಎರಡು ಅಭಿವ್ಯಕ್ತಿಕ್ರಮಗಳು ಅನ್ನುವ ಹಾಗೆ ಬದುಕಿದ್ದೀರಿ, ಬರೆದಿದ್ದೀರೆ... ನನ್ನ ಜೊತೆ ಇಷ್ಟು ಹೊತ್ತು ಕೂತು ಮಾತಾಡಿದ್ದಕ್ಕೆ ವಂದನೆಗಳು.

(ಪರದೇಶಗಳಿಗೆ ಆಲ್ ಇಂಡಿಯಾ ರೇಡಿಯೋ ಮಾಡುವ ಪ್ರಸರಕ್ಕಾಗಿ ಈ ಸಂದರ್ಶನ ಇಂಗ್ಲಿಷಿನಲ್ಲಿ ನಡೆಯಿತು, ಮಾಸ್ತಿಯವರಿಗೆ ಜ್ಞಾನಪೀಠ ಪ್ರಶಸ್ತಿ ಬಂದ ಹೊಸದರಲ್ಲಿ ಸಂದರ್ಶನ ನಡೆದದ್ದು.)

# ಮಾಸ್ತಿ ವೆಂಕಟೇಶ ಅಯ್ಯಂಗಾರ್ : ಒಂದು ಸಂದರ್ಶನ

ಎಲ್. ಎಸ್. ಶೇಷಗಿರಿ ರಾವ್

ರಾವ್ : ಸರ್, ನಿಮಗೆ ಜ್ಞಾನಪೀಠ ಪ್ರಶಸ್ತಿ ಬಂದಿರೋದು ನಮಗೆಲ್ಲಾ ಬಹಳ ಸಂತೋಷ. ನಿಮ್ಮದು ಅತ್ಯಂತ 'ಶ್ರೀಮಂತ' ಜೀವನ–ಆ ಪದದ ಉತ್ಕೃಷ್ಟತಮ ಅರ್ಥದಲ್ಲಿ. ಈ ಸಮೃದ್ಧ ಜೀವನದ ಒಂಭತ್ತು ದಶಕಗಳನ್ನ ಇವತ್ತು ತಿರುಗಿ ನೋಡಿದಾಗ, ನಿಮಗೆ ಏನು ಅನ್ನಿಸತ್ತೆ, ಸರ್ ? ನಿಮಗೆ ಮುನ್ನಾದಿನಗಳ ಕಷ್ಟ, ಹೋರಾಟ ಗೊತ್ತು. ನಂತರದ ಸಿರಿವಂತಿಕೆ, ಅಧಿಕಾರ ಗೊತ್ತು. ನಿರಾಸೆ ಅನುಭವಿಸಿದ್ದೀರಿ...

ಮಾಸ್ತಿ : ಹೌದು, ನಿರಾಸೆಗಳು ಅನೇಕ. ಆದರೆ ನಾನು ಯಾವತ್ತೂ ಅವುಗಳ ಬಗ್ಗೆ ತಲೆ ಕೆಡಿಸಿಕೊಂಡಿಲ್ಲ. ಹಿಂದೆ ಎಷ್ಟೋ ದುಃಖ ಸಂಕಟ, ತೊಂದರೆಗಳು ಬಂದಿವೆ. ಆದರೆ ಈಗ ಅವೆಲ್ಲ ಯಾವುದೂ ಇಲ್ಲ. ಹಿಂದೆ ನೀರಿನಲ್ಲಿ ಒದ್ದಾಡ್ತಾ ಕಳೆದ ಕಾಲದ ಬಗ್ಗೆ ನಾನು ಯೋಚ್ನೆ ಮಾಡಲ್ಲ. ಈಗ ನಾನು ದಡ ಸೇರಿ ಸುರಕ್ಷಿತವಾಗಿದೀನಿ, ಸಂತೋಷವಾಗಿದೀನಿ. ಎಲ್ಲಾ ಸಮಯದಲ್ಲೂ ಆ ದೊಡ್ಡವನು ನನ್ನ ಜೊತೇಲೇ ಇದ್ದ. ನನ್ನ ಅಂತರ್ಯಾಮಿಯನ್ನು ನಾನು ದೇವರು, ಗುರು ಅಂತ ಕರೀತೀನಿ. ಹಾಗೊಬ್ಬ ಇದಾನೆ ಅಂತ ನಂಗೆ ಇತ್ತೀಚಿನವರೆಗೆ ತಿಳಿದಿರಲಿಲ್ಲ. ಆದ್ರೆ ಅವನು ಪ್ರತಿಕ್ಷಣವೂ ನನ್ನ ಕಾಯ್ತಾ ಇದಾನೆ ಅನ್ನೋದು ಇದ್ದಕ್ಕಿದ್ದ ಹಾಗೆ ಅರಿವಾಯ್ತು.

ದೇವರು ನಮ್ಮ ಜತೆ ಸದಾ ಇರ್ತಾನೆ. ನಮ್ಮ ಹಿರಿಯರು ಇದನ್ನ ಹೇಳಿದಾರೆ. ನನ್ನ ಗುರು ರಾಮಾನುಜ ಹೇಳಿದಾರೆ : ದೇವರಿಗೆ ಐದು ರೂಪಗಳಿವೆ : ಅದರಲ್ಲಿ ಒಂದು ಅಂತರ್ಯಾಮಿ, ನಿಮ್ಮೊಳಗೇ ಇರುವ ದೇವರು." ಅಂತ. ಹೀಗೆ ಅತಿ ನೀಚನಾದ ವ್ಯಕ್ತೀಲೂ ದೇವರಿದಾನೆ. ಬೇರೆ ಯಾರಿಗಿಂತಲೂ, ಯಾವುದಕ್ಕಿಂತಲೂ ನಮಗೆ ಅತಿ ಆಪ್ತವಾಗಿರೋದು ಈ ದೇವರು. ನಮ್ಮ ಆಲೋಚನೆಗಳು ಆಲೋಚನೆಗಳಾಗಿ ರೂಪು ಪಡೆಯೋದಕ್ಕೆ ಮುಂಚೇನೇ, ಅವನಿಗೆ ಅದು ಗೊತ್ತು. ನಮ್ಮ ಆಲೋಚನೆಗಳು, ನಮ್ಮ ಇಡೀ

ಅಸ್ತಿತ್ವಾನೇ ಅವನಿಂದ ಪ್ರೇರಿತ. ನನ್ನ ದೇವರು ನನ್ನೊಳಗೆ ಇಲ್ದೆ ಹೋದ್ರೆ ನಂಗೆ ಉಸಿರಾಡೋದೂ ಸಾಧ್ಯ ಇಲ್ಲ.

ವ್ : ಸರ್, ನಿಮಗೆ ಇದರ ಅರಿವಾಗಿದ್ದು ಈಗ ಕೆಲವೇ ವರ್ಷಗಳ ಹಿಂದೆ ಅಂತ ಹೇಳಿದ್ರಿ. ಅದು ಇದ್ದಕ್ಕಿದ್ದ ಹಾಗೆ ಹೇಗೆ ಆಯ್ತು ಅಂತ ಸ್ವಲ್ಪ ಹೇಳ್ತೀರಾ ?

ಾಸ್ತ್ರಿ : ಖಂಡಿತ. ಜೀವನದಲ್ಲಿ ಪಡಬಾರದ ಕಷ್ಟ, ಅವಮಾನಗಳನ್ನ ಅನುಭವಿಸಿದೀನಿ. ಹಲವಾರು ತಾಪತ್ರಯಗಳಲ್ಲಿ ಸಿಕ್ಕಿ ಹಾಕಿಕೊಂಡಾಗ, ನಂಗೆ ಗೊತ್ತಿಲ್ದೇನೇ ಏನೋ ಆಗಿ, ಪಾರಾಗಿ ಬಂದಿದೀನಿ. ಒಂದು ಉದಾಹರಣೆ ಹೇಳ್ತೀನಿ. ಒಂದು ಸಲ ಯಾವುದೋ ಮದುವೆಗೆ ಅಂತ ಒಂದು ಹಳ್ಳೀಗೆ ಹೋಗಿದ್ದೆ. ರಾತ್ರಿ ವೇಳೆ, ಕಾಲು ತೊಳ್ಕೊಂಡು ಬರೋಣಾಂತ ಎದ್ದೆ. ಹಿರಿಯರು ರಂಗಸ್ವಾಮಿ ಅಯ್ಯಂಗಾರ್ರೂ ನನ್ನ ಜತೆ ಬಂದರು. ಹಳ್ಳಿ ಅಂಚನ್ನ ಮುಟ್ಟಿ, ಎರಡೂ ಕಡೆ ಗಿಡಗಳು ಬೆಳ್ಕೊಂಡಿದ್ದ ಒಂದು ಓಣೀ ಒಳಗೆ ಹೋದ್ವಿ. ಆ ಗಿಡಗಳನ್ನ ದಾಟ್ಕೊಂಡು ಬಯಲಿನ ಕಡೆ ಹೊರಟೆ ನಾನು. ಏಳೆಂಟು ಹೆಜ್ಜೆ ನಡೆದಿರಬಹುದು. ಜತೇಲಿ ಬಂದಿದ್ದ ಹಿರಿಯರು "ಅಷ್ಟು ದೂರ ಯಾಕೆ ಹೋಗ್ತೀಯಾ ಈ ಕತ್ತಲಲ್ಲಿ. ಇಲ್ಲೇ ಕೂತ್ಕೊ." ಅಂದರು.

ಮಾರನೆ ದಿನ ಬೆಳಿಗ್ಗೆ ಮುಖ ತೊಳೆಯಕ್ಕೆ ಅಂತ ನಾನು, ಆ ಹಿರಿಯರು ಅದೇ ದಾರೀಲಿ ಕೆರೆ ಕಡೆ ಹೊರಟ್ವಿ. ಹೀಗೆ ಹೋಗ್ತಿದ್ದಾಗ ನೋಡ್ತೀವಿ–ಹಿಂದಿನ ರಾತ್ರಿ ಆ ಬಯಲಲ್ಲಿ ಇನ್ನೊಂದು ಹೆಜ್ಜೆ ಇಟ್ಟಿದ್ರೆ ನಾನು ಅಲ್ಲಿದ್ದ ಹಾಳು ಭಾವಿ ಒಳಗೆ ಬಿದ್ಬಿಡ್ತಿದ್ದೆ. (ನಗು) ಯಾರು ನನ್ನ ತಡೆದು ನಿಲ್ಲಿಸಿದವರು ; ಹೇಳಿ ನೋಡೋಣ ? ರಂಗಸ್ವಾಮಿ ಅಯ್ಯಂಗಾರ್ರಿಗೆ ತಿಳಿದಿತ್ತೇನು, ನಾನು ಅಪಾಯದಲ್ಲಿದ್ದೆ ಅನ್ನೋದು ? ನಂಗಾದ್ರೂ ಅದು ತಿಳಿದಿತ್ತೇನು ? ಆದರೆ ಯಾರೋ ಒಬ್ರಿಗೆ ತಿಳಿದಿತ್ತು. ಯಾವುದೋ ಒಂದು ಶಕ್ತಿಗೆ ಗೊತ್ತಿತ್ತು. ಅದು ನನ್ನನ್ನ ರಕ್ಷಣೆ ಮಾಡ್ತು ಅಂತ ನಂಗೆ ತೋರತ್ತೆ. ಅದನ್ನೇ ನಾನು ನನ್ನ ದೈವ ಅಂತೀನಿ. ಜನ ಅನ್ನಬಹುದು–ಈ ಸಂಗ್ತೀಗೂ ನಮ್ಮೊಳಗೂ ಹೊರಗೂ ಇರೋ ಆ ಅಂತರ್ಯಾಮಿಗೂ ಗಂಟು ಹಾಕೋ ಇವನು ಮೂರ್ಖ ಅಂತ. ಆದ್ರೆ ಇದು ನನ್ನ ಮಟ್ಟಿಗೆ ನಿಜ ಅಲ್ವಾ ? ಈ ಅನುಭವ ನಂಗೆ ಬಹಳ ನಿಜವಾದ್ದು. ಅದನ್ನ ಹೇಗೆ ತಾನೆ ನಂಬದೆ ಇರಲಿ ?

ರಾವ್ : ಈ ತರದ ಅನುಭವಗಳು ನಮ್ಮ ನಮ್ಮ ಮಟ್ಟಿಗೆ ಸತ್ಯಾನೇ. ಇವ
ನಮ್ಮ ನಂಬಿಕೆ, ಧೋರಣೆಗಳನ್ನ ನಿರ್ಧಾರ ಮಾಡ್ತವೆ. ನಮ
ಅರಿವಿನ ಒಂದು ಭಾಗ ಆಗಿಬಿಡ್ತವೆ.

ಮಾಸ್ತಿ : ನಾನು ಅದೇ ಹೇಳ್ತಿರೋದು. ನನ್ನ ಕಾಪಾಡ್ತಾ ಇರೋ ಒಂದ
ಶಕ್ತಿ ಇದೆ ಅನ್ನೋ ವಿಷಯ ನನ್ನ ಮಟ್ಟಿಗೆ ಸತ್ಯಾನೇ ನೀವು ಏನಾದ್ರೂ
ಕೊಟ್ರೆ ಸಂತೋಷ, ಕೊಡದಿದ್ರೂ ಸಂತೋಷ. ಯಾವುದಾಗ್ಲಿ
ಅದು ನನ್ನ ಸಂತೋಷಕ್ಕೆ ಭಂಗ ತರಲ್ಲ. ಈಗ ಜ್ಞಾನಪೀಠ ಪ್ರಶಸ್ತಿ
ಬಂತು – ಒಳ್ಳೇದು. ಬರ್ಲಿಲ್ಲ, ಅದೂ ಒಳ್ಳೆ.ದೇ. ಈ ಅರಿವು ನನ್ನ
ಜೀವನಕ್ಕೆ ಬೇರೆ ತಿರುವನ್ನೇ ಕೊಟ್ಟಿದೆ. ಅದು ಉಂಟಾಗಿ ಸುಮಾರು
22 ವರ್ಷಗಳಾದ್ವು, 1962ರಲ್ಲಿ. ಅದರ ನಂತರದ ನನ್ನ ಅನುಭವ
ನನ್ನ ಅನಿಸಿಕೆಯನ್ನು ನಿಜ ಮಾಡಿದೆ.

ರಾವ್ : ಅನೇಕ ಸಂದರ್ಭಗಳಲ್ಲಿ ಈ ಮೇಲಿನ ಶಕ್ತಿ ನಮ್ಮನು ಕಾಪಾಡಲ್ಲವಲ್ಲ
ಅದನ್ನ ಹೇಗೆ ಅರ್ಥ ಮಾಡ್ಕೊಳ್ಳೋದು ?

ಮಾಸಿ : ಇದರ ಅನುಭವ ನಂಗೂ ಆಗಿದೆ ನಂಗೆ ಮಂತ್ರಿಪದವಿ ತಪ್ಪಿ
ಹೋಗಿದ್ದು ಯಾಕೆ ? ಅದು ನನ್ನ ಒಳ್ಳೇದಕ್ಕೆ ಅಂತ್ಲೇ ನಾನು
ಹೇಳೊದು (ನಗು). ಏನು ಒಳ್ಳೇದಾಯ್ತು ಅಂದ್ರೆ, ಆ ದೇವರಿಗೇ
ಗೊತ್ತು (ನಗು). ಬದುಕನ್ನು ಅದು ಬರೋ ಹಾಗೇ ಒಪ್ಕೋಬೇಕು.
ಅದು ವಿಧಿ. ಈ ಬದುಕಲ್ಲಿ ಯಾವ್ದೂ ಆಕಸ್ಮಿಕ ಅಲ್ಲ–ಪ್ರತಿಯೊಂದರ
ಹಿಂದೂ ವಿಧಿಯ ಕೈವಾಡ ಇದೆ, 'ತೇನ ವಿನಾ-ತೃಣಮಪಿ ನ ಚಲತಿ'
ಅಂತ ಹೇಳತ್ತೆ ಉಪನಿಷತ್ ವಾಕ್ಯ.

ರಾವ್ : ಹಾಗಾದ್ರೆ ವೈಯುಕ್ತಿಕ ಜವಾಬ್ದಾರಿಗೆ ಯಾವ ಸ್ಥಾನ ಇದೆ ಸರ್ ?

ಮಾಸ್ತಿ : ಯಾವ ಸ್ಥಾನವೂ ಇಲ್ಲ.

ರಾವ್ : ಅಂದ್ರೆ ವ್ಯಕ್ತಿಗೆ ಯಾವ ನೈತಿಕ ಆಯ್ಕೇನೂ ಇಲ್ಲ ಅಂತ್ಲೇ ?

ಮಾಸ್ತಿ : ನೈತಿಕ ಆಯ್ಕೆ ಇದೆ. ದೇವರು ದಾರಿ ತೋರಿಸ್ತಾನೆ, ಆದ್ರೆ ಮನುಷ್ಯ
ಕೇಳಲ್ಲ, ತಪ್ಪುಮಾಡುತ್ತಾನೆ. ಅವನು ಕ್ಷಮಿಸ್ತಾನೆ. ಮಗೂಗೆ
ನಡೆಯಕ್ಕೆ ಆಗಲ್ಲ, ಆದ್ರೂ ಆ ತಂದೇಗೆ ಇಷ್ಟ–ಮಗು ನಡೀಬೇಕು
ಅಂತ, ಮಗು ನಡೆಯುತ್ತೆ, ಬೀಳತ್ತೆ. ಬೀಳೋವಾಗ ಪೆಟ್ಟು ತುಂಬಾ
ಆಗೋದಾದ್ರೆ, ಅವನು ಕಾಪಾಡ್ತಾನೆ. ಸುಮ್ನೆ ಬಿದ್ದು ಒಂಚೂರು
ತರಚಿ ಪರಚಿ ಗಾಯ ಆಗೋದಿದ್ರೆ, ಆಗ್ಲಿ ಅಂತ ಸುಮ್ನಿರ್ತಾನೆ
ಅದಕ್ಕೇ ನಾನು ಹೇಳೋದು ನಮ್ಮ ಜೀವನದ ಪ್ರತಿಗಳಿಗೇಲೂ
ನಮ್ಮನ್ನ ಕಾಯೋ ಒಂದು ಶಕ್ತಿ ಇದೆ ಅಂತ.

ಮೊನ್ನೆ ನಂಗೆ 75 ವರ್ಷ ತುಂಬ್ದಾಗ, ಅಂದ್ರೆ ಈಗಾಗ್ಲೇ 18 ವರ್ಷ ಆಯ್ತು, ನನ್ನ ನೋಡಕ್ಕೆ ಪುಟ್ಟರಾಜು ಬಂದ. ಅವನು ನನ್ನ ಸ್ಕೂಲ್‌ಮೇಟ್, ಕ್ರಿಶ್ಚಿಯನ್ ಹುಡ್ಗ. ನಂಗಿಂತ ಸ್ವಲ್ಪ ದೊಡ್ಡವನು. ಮಾತು ಮುಗಿದು ಮನೆಗೆ ಹೊರಟಾಗ ನನ್ನ ಕೇಳ್ದ ; " 75 ವರ್ಷ ? ಎಂಥ ದೀರ್ಘವಾದ ಜೀವನ. ಇಷ್ಟೆಲ್ಲ ವರ್ಷ ಬದುಕಿ ಬಾಳಿದ ಅನುಭವದ ಸಾರವನ್ನು ಹೇಳು" ಅಂತ ನಾನು ಹೇಳ್ದೆ ; " ಪುಟ್ಟ ರಾಜು. ಕಷ್ಟವಾದ ಪ್ರಶ್ನೆ ಕೇಳ್ತಿದೀಯ. 75 ವರ್ಷದ ಅನುಭವಾನೆಲ್ಲ ಒಂದೇ ವಾಕ್ಯದಲ್ಲಿ ಹೇಳಕ್ಕಾಗತಾ?" ಆಗ ಅವನು "ಬೇಡ ನಿಧಾನ ವಾಗೇ ಹೇಳು, ಎಲ್ಲಾ ಅನುಭವಾನೂ ಹೇಳಬೇಡ. ಆದರ ಸಾರ ಏನೂಂತ ಹೇಳು, ಸಾಕು." ಅಂದ. ಕೇವಲ ಅರ್ಧ ನಿಮಿಷ ಕೂತ್ಕೊಂಡು, ಯೋಚ್ನೆಮಾಡಿ ಹೇಳ್ದೆ. ದೇವರಲ್ಲಿನಂಬಿಕೆ ಇಡು, ಅವನು ನಮ್ಮ ಜೀವನದ ಪ್ರತಿಕ್ಷಣದಲ್ಲೂ ನಮ್ಮನ್ನು ಕಾಯ್ತಾನೆ ಅನ್ನೋ ಸತ್ಯಾನ ತಿಳಿ" (ನಗು), ಇದನ್ನು 18 ವರ್ಷಗಳ ಕೆಳಗೇ ಹೇಳ್ದೆ. ಆ ನಂಬ್ಕೆ ಇವತ್ತೂ ಬದ್ಲಾಗಿಲ್ಲ, ಏನಿದ್ರೂ ಇನ್ನೂ ಹೆಚ್ಚು ಬಲಿಷ್ಠವಾಗಿದೆ. ಈ ನಂಬ್ಕೇನ ಬೇರೇವರ ಮೇಲೆ ಹೇರಕ್ಕೆ ಇಷ್ಟ ಇಲ್ಲ ನಂಗೆ. ಅದು ನಂಗೆ ಒಳ್ಳೇದು ಮಾಡಿದೆ ಅಂತ ಇಷ್ಟೇ ಹೇಳ್ತಿದೀನಿ.

ರಾವ್ : ಆದ್ರೆ ಮನುಷ್ಯ ಯಾಕೆ ಒಳ್ಳೇವನಾಗಿರಬೇಕು ಸರ್?

ಮಾಸ್ತಿ : ಯಾಕೇಂದ್ರೆ ಆ ದೇವರಿಚ್ಛೆ ಇರೋದು ಹಾಗೇನೇ (ನಗು) ಅಂಬೆ ಗಾಲಿಕ್ಕೋ ಮಗೂಗೆ ಪ್ರತಿಯೊಂದು ಹೆಜ್ಜೆ ಇಡಿಸಿ, ನಡೆಯೋದು ಹೇಳಿಕೊಡ್ತಾನೆ. ಘನತೆಯಿಂದ ತಲೆಯೆತ್ತಿ ನಡೆಯೋದಕ್ಕೆ ಹೇಳಿ ಕೊಡ್ತಾನೆ. ಜೀಸಸ್, ಕ್ರೈಸ್ತ್ ಹೇಳಿದಾನೆ 'ನಾನು, ನನ್ನ ತಂದೆ ಇಬ್ಬರೂ ಒಂದೇ ಅಂತ. ಅಂದರೇನು ಅರ್ಥ. ? ನಮ್ಮ ತಂದೆ ನಮ್ಮೆಲ್ಲರಲ್ಲೂ ಇದಾನೆ ಅಂತ. ನಮ್ಮಾ ಚಾರ್ಯರು ಹೇಳಿಲ್ವೆ ದೇವರು ಮಾತ್ರ ಇರೋದು, ಬೇರೇನೂ ಇಲ್ಲ. ಅಂತ.

ಆದರೆ ನೀನು, ನಾನು ಬೇರೆ ಬೇರೆ ಅಸ್ತಿತ್ವ ಇರೋವರು ಅದಕ್ಕೇ ಅದು 'ವಿಶಿಷ್ಟಾದ್ವೈತ' ರಾಮಾನುಜಾಚಾರ್ಯರೂ ಅದನ್ನೇ ಹೇಳಿದ್ದು. ಶಂಕರಚಾರ್ಯರು ದೇವರಿಲ್ಲ ಅಂತ ಹೇಳ್ಲಿಲ್ಲ 'ಭಜ ಗೋವಿಂದಂ' ಅಂದ್ರು. ಮಧ್ವಾಚಾರ್ಯರು ಏನು ಹೇಳಿದ್ರು ? "ಅವನು ಅವನೇ, ನೀನು ನೀನೇ (ನಗು) ನೀನು ದೇವರಲ್ಲ, ದೇವರು ನೀನಲ್ಲ, ನೀನು ತಪ್ಪುಮಾಡಿದರೆ ದೇವರು ಜವಾಬ್ದಾರ ಅಲ್ಲ, ನೀನು ಮಾಡೋ ತಪ್ಪುಗೆ ನೀನೇ ಹೊಣೆ,"

ರಾವ್ : ಸರ್, ಬೇರೆ ಎಷ್ಟೋ ಸಾಹಿತಿಗಳು ಮಾಡಕ್ಕೆ ಆಗದಿರೋ ರೀತಿಯಲ್ಲಿ ನೀವು ಒಳಿತಿನ ಚೆಲುವನ್ನ ನಿಮ್ಮ ಬರವಣಿಗೇಲಿ ತೋರ್ಸಿದೀರಾ.

ಮಾಸ್ತಿ : ನಂಗೊತ್ತಿಲ್ಲಪ್ಪ (ನಗು).

ರಾವ್ : ಇತರ ಸಾಹಿತಿಗಳು ಒಳಿತಿನ ಬಗ್ಗೆ ಮಾತಾಡಿರಬಹುದು. ಆದ್ರೆ ಅದರ ಚೆಲುವನ್ನ, ಹೊಳಪನ್ನ ನೀವು ನಿಮ್ಮ ಕೃತಿಗಳಲ್ಲಿ ಸೆರೆ ಹಿಡ್ದಿದೀರಾ.

ಮಾಸ್ತಿ : ನಾನೇನಾದ್ರೂ ಮಾಡಿದ್ರೆ, ಅದು ನನ್ನಲ್ಲಿರೋ ಒಂದು ಆಂತರಿಕ ಶಕ್ತಿ ಮಾಡ್ಸಿರೋದು, ನಾನಲ್ಲ. ನೆನಪಿಲ್ಲವೇ "ವೀರನಾರಾಯಣನೆ ಕವಿ ಲಿಪಿಕಾರ ಕುಮಾರವ್ಯಾಸ."

ರಾವ್ : ಈ ಕಾಲದ ನಾವು ಕೇಳಿರೋ ಪ್ರಕಾರ, 73 ವರ್ಷಗಳ ಹಿಂದೆ ನೀವು ಬರೆಯಕ್ಕೆ ಪ್ರಾರಂಭ ಮಾಡಿದಾಗ, ಕನ್ನಡದಲ್ಲಿ ಬರೆಯೋಕೆ ಯಾವ ಪ್ರೋತ್ಸಾಹಾನೂ ಇರಲಿಲ್ಲ. ಕನ್ನಡವನ್ನು ತುಚ್ಛವಾಗಿ ಕಾಣ್ತಾ ಇದ್ದ ಕಾಲ ಅದು ಅಂತ. ಆಗಿನ ಪರಿಸರದ ಬಗ್ಗೆ ಏನಾದ್ರೂ ಒಂದೆರಡು ಮಾತು ಹೇಳ್ತೀರಾ ಸರ್ ? 1910–11ರಲ್ಲಿ ನೀವು ಬರೆಯೋದಕ್ಕೆ ಶುರು ಮಾಡಿದ್ದು.

ಮಾಸ್ತಿ : ಆಗ ಕನ್ನಡಕ್ಕೆ ಮರ್ಯಾದೆ ಇರಲಿಲ್ಲ. ಅಂಗ್ಲರ ಗುಲಾಮರಾಗಿದ್ದ ಕಾಲ. ಬ್ರಿಟಿಷರು ನಮ್ಮನ್ನ ಆಳೋವ್ರು, ಆದ್ದರಿಂದ ಅವರು ಮಾಡಿದ್ದನ್ನೇ ನಾವೂ ಮಾಡಬೇಕು ಅಂತ. ಅವರು ಉಸಿರಾಡ್ತಾ ಇದ್ರು ಅಂತ ನಾವೂ ಉಸಿರಾಡ್ತಾ ಇದ್ವಿ. ಮೂರ್ಖರು, ಮೂರ್ಖ ಸಾಮ್ರಾಜ್ಯ. ಕಿಂದರ ಜೋಗಿ ಹಿಂದೆ ಮರುಳಾಗಿ ಓಡಿದ ಮಕ್ಕಳ ಹಾಗಿದ್ವು ನಾವು.

ರಾವ್ : ಹಾಗಾದ್ರೆ ಕನ್ನಡದಲ್ಲಿ ಬರೆಯೋದಕ್ಕೆ ನಿಮಗೆ ಪ್ರೇರಣೆ ಎಲ್ಲಿಂದ ಸರ್ ?

ಮಾಸ್ತಿ : ನಿಮ್ಮ ಜನದ ಮೇಲಿನ ಪ್ರೀತಿ. 'ಸ್ಟ್ರ್ಯಾಂಡ್' (Strand) ಪತ್ರಿಕೆಯ ಕತೆಗಳನ್ನ ಓದ್ತಾ ಇದ್ದಾಗ ಅನ್ನಿಸ್ತಿತ್ತು. 'ಇಂಗ್ಲೆಂಡಿನ ಜನ ಮಾತ್ರ ಇಷ್ಟೆಲ್ಲಾ ಕತೆಗಳನ್ನು ಓದಿ ಸಂತೋಷ ಪಡ್ತಾರೆ. ನಮ್ಮ ಜನರ ಪಾಡು ? ಅವರಿಗೂ ಈ ತರದ ಕೆಲವು ಕತೆಗಳಿರಬೇಕು,' ಅಂತ. ಆದಕ್ಕೆ ನಾನು ಕತೆಗಳನ್ನು ಬರೆದೆ. ಈ ಹುಡುಗನಿಗೆ ನಮ್ಮ ಜನಕ್ಕಾಗಿ ಬರೀಬೇಕು ಅನ್ನೋ ಆಸೆ ಹುಟ್ತು.

ನಾನು ಹುಟ್ಟಿನಿಂದ್ಲೇ ಬರಹಗಾರ ಅಂತ ಕಾಣತ್ತೆ. ಬರೀಬೇಕು ಅನ್ನೋ ಪ್ರೇರಣೆ, ಒತ್ತಾಯಾನ ಹತ್ತಿಕ್ಕೋದಕ್ಕೆ ಸಾಧ್ಯವೇ ಆಗ್ಲಿಲ್ಲ. 1910, ಆಗ ನಂಗಿನ್ನೂ 19 ವರ್ಷ. 'ರಂಗನ ಮದುವೆ' ಅನ್ನೋ ಕತೆ ಶುರು ಮಾಡ್ದೆ. 10, 12 ವರ್ಷಕ್ಕೆ ಮದುವೆ ಮಾಡ್ಕೋಳೋ ಈ

ಹುಡ್ಗೀರು ಪ್ರೀತಿ ಪ್ರೇಮ ಅಂದ್ರೆ ಏನು ಗೊತ್ತು ? ಅಂಥವರಿಗೆ ಏನು ಹೇಳಕ್ಕಾಗತ್ತೆ ಅಂತ ಅನೋತಿದ್ದೆ. ಆದ್ರೂ ಮದುವೆ ಏನೋ ಮಾಡ್ಕೊಂಡೆ ಅಂತಿಟ್ಕೊಳಿ (ನಗು).

ರಾವ್ : ಸರ್, ನಿಮ್ಮ ಮೊದಲ್ನೆ ಕಥಾ ಸಂಗ್ರಹದಲ್ಲೇ 'ಇಂದಿರೆಯೋ ಅಲ್ಲವೊ' 'ಬೀದಿಯಲ್ಲಿ ಹೋಗುವ ನಾರಿ' ಅಂಥಾ ಉತ್ತಮ ಕತೆಗಳಿವೆಯಲ್ಲ; ಈ ಪ್ರಕಾರವನ್ನೇ ಹೇಗೆ ಆರಿಸಿಕೊಂಡ್ರಿ ?

ಮಾಸ್ತಿ : ಸುಮ್ನೆ ಹೀಗೇ 'Strand' ಪತ್ರಿಕೆಯ ಕತೆಗಳನ್ನು ನೋಡಿ ನಾನು ಕತೆ ಬರೆಯಕ್ಕೆ ಶುರು ಮಾಡಿದೆ.

ರಾವ್ : ಇಡೀ ಮಾಧ್ಯಮವೇ ನಿಮಗೋ ಸ್ಕರ ಕಾಯ್ತು ಇತ್ತು ಅಂತ ಕಾಣತ್ತೆ. ಯಾಕೆ ಅಂದ್ರೆ ಮೊದಲ ಸಂಗ್ರಹದ ಕತೆಗಳಲ್ಲೇ ಅಷ್ಟೊಂದು ನೈಪುಣ್ಯ, ಆತ್ಮವಿಶ್ವಾಸ ತೋರ್ಸಿದೀರಿ.

ಮಾಸ್ತಿ : ಹೌದು ಅಂತ್ಲೇ ಕಾಣುತೆ. ನಾನು ಸರಿಯಾಗಿ ಬರೀತಾ ಇದೀನಿ ಅಂತ ನಂಗೆ ಖಂಡಿತ ಗೊತ್ತಿತ್ತು. ಜನ ನನ್ನ ನೋಡಿ ನಕ್ರೆ ನಾನು ಅವರನ್ನ ನೋಡಿ ನಗ್ತಾ ಇದ್ದೆ.

ರಾವ್ : ನಿಮ್ಮನ್ನು ನೋಡಿ ನಕ್ಕಿದ್ದೂ ಉಂಟೇನು ಸರ್ ?

ಮಾಸ್ತಿ : ಖಂಡಿತ. ಇದರಲ್ಲಿ ಏನು ಮಹಾ ಇದೆ, ಅಂದ್ರು. ತುಂಗಮ್ಮ ಅನ್ನೋ ಒಬ್ಬ ಯುವತಿ ಹೇಳಿದ್ಲು–"ನಾವು ದಿನ ಬೆಳಗಾದ್ರೆ ನೋಡೋ ಅಂತದ್ದನ್ನೇ ಬರ್ದಿದೀರಲ್ಲಾ ಮಾಸ್ತಿಯವರೆ" ಅಂತ. ಆಗ ನಾನು ಹೇಳಿದ್ದೆ–"ಅಯ್ಯೋ ತಂಗಿ, ಅದೇ ಸಾಹಿತ್ಯ" ಅಂತ,

**ತಾಯಿ, ಮಗು, ಮಾಯೆ**

ರಾವ್ : ಅಂದರೆ, ಬದುಕಿನ ಅನುಭವ ಅನ್ನೋ ಕಚ್ಚಾಪದಾರ್ಥ ಸಾಹಿತ್ಯ ಆದಾಗ, ಅದಕ್ಕೆ ಏನಾಗತ್ತೆ ಸರ್ ?

ಮಾಸ್ತಿ : ಬರೆಯೋ ಮನಸ್ಸು ಒಂಥರಾ (magic) ಮ್ಯಾಜಿಕ್. ಹೌದು. ಯಾಕೆ ಅಂದ್ರೆ ಅದು ಬದಲಾಗ್ತ ಹೋಗತ್ತೆ. ನಾನು ಏನನ್ನು ನೋಡ್ತೀನೋ ಅದೇ ಬರವಣಿಗೆಗೆ ಸಾಮಗ್ರಿ. ಆದ್ರೆ ಕತೆಯಾದಾಗ ಅದು ಬೇರೆ ಆಕಾರವನ್ನು ಪಡೆಯುತ್ತೆ. ಸೂಕ್ಷ್ಮ ತಿಳ್ಕೊಳೋನಿಗೆ ಅದು ಸಂತೋಷ ಕೊಡತ್ತೆ ಅದು ಹೇಗೆ ಬರೀತಿದೀವಿ ಅನ್ನೋದು ಗೊತ್ತೇ ಆಗಲ್ಲ. ತಾಯಿಗೆ ಮಗು ಹೇಗೆ ತನ್ನ ಗರ್ಭದಲ್ಲಿ ಬೆಳೀತಿದೆ ಅನ್ನೋದು ತಿಳಿಯಲ್ವೋ, ಇದೂ ಹಾಗೇ. (ನಗು). ಅದಕೋಸ್ಕರ ತಾಯಿ ಏನಾದ್ರೂ ಮಾಡ್ತಾಳಾ ? ಇಲ್ಲ. ತಾಯಿ ಅಂದರೇ ಹಾಗೆ. ಅವಳ ದೇಹಸ್ವರೂಪಾನೇ ಹಾಗೆ. ಅವಳು ಏನೂ ಮಾಡ್ದೇ

ಹೋದ್ರೂ ಮಗು ಬೆಳೆದೇ ಬೆಳೆಯುತ್ತೆ, ದೊಡ್ಡದಾಗತ್ತೆ. ಹಾಗೇ ಸಾಹಿತೀನೂ ಪ್ರಜ್ಞಾಪೂರ್ವಕವಾಗಿ ಎಲ್ಲಾನೂ ಚಿಂತಿಸಿ, ಪ್ರಯತ್ನ ಮಾಡಿ ಕೂತು ಬರೆಯಲ್ಲ. ಅದು ತಾನಾಗೇ ಬೆಳೆಯುತ್ತೆ.

ರಾವ್ : ಸರ್, ಈಚೆಗೆ ಕಲೆಯ ಹಿಂದಿರೋ ತಂತ್ರವನ್ನು ಕುರಿತು ಏಷ್ಟೋ ಚರ್ಚೆಗಳಾಗಿವೆಯಲ್ಲ; ಕತೆಯಿಂದ ಕತೆಗೆ ನಿಮ್ಮ ತಂತ್ರ ಬದಲಾಗ್ತಾ ನಡೆದಿದ್ಯಲ್ಲಾ, ಇದು ಹೇಗೆ ಆಗತ್ತೆ ? ತಂತ್ರದ ಬಗ್ಗೆ ಯೋಚ್ನೆ ಮಾಡಿ ಬರೀತೀರಾ ನೀವು ?

ಮಾಸ್ತಿ : ಇಲ್ಲ, ಇಲ್ಲ, ಅದು ತನ್ನಿಂತಾನೇ ಆಗೋ ಕ್ರಿಯೆ. ನಿಮ್ಗೆ ಗೊತ್ತಿರೋ ಹಾಗೆ ಬೇರೆ ಬೇರೆ ರೀತಿಗಳಲ್ಲಿ ಬರ್ದಿದೀನಿ–ಸಂಭಾಷಣೆ, ಪತ್ರ ವ್ಯವಹಾರ, ಕೊನೆಗೆ ವರದಿ ಕೂಡಾ.

ರಾವ್ : ಹೌದು. ನೀವು ನಿರೂಪಣೆಯ ಒಂದು ಚೌಕಟ್ಟನ್ನೇ ಒದಗಿಸಿ ಕೊಟ್ಟಿದೀರಾ.

## ಕಾದಂಬರಿಗಳು

ಮಾಸ್ತಿ : ಹೌದು, ಹೀಗೆ ಎಲ್ಲಾನೂ ತನ್ನಷ್ಟಕ್ಕೆ ತಾನೇ ರೂಪಿಸಿ ಕೊಳ್ಳತ್ತೆ.

ರಾವ್ : ಹಾಗಾದ್ರೆ, ಕಾದಂಬರಿಗಳು ? ಆದರಲ್ಲೂ ದೊಡ್ಡವು.

ಮಾಸ್ತಿ ; ಹಾಗೇನೇ. ಈಗ ನೋಡಿ ಚನ್ನಬಸವನಾಯಕನನ್ನು ನೋಡಿದೆ. ಈ ಹದಿಹರೆಯದ ಯುವಕನನ್ನ ನೋಡಿ ಕರುಣೆ ಉಕ್ಕಿ ಬಂತು. ಅವನ ಬಗ್ಗೆ ಯೋಚ್ನೆ ಮಾಡ್ದಾಗ ದುಃಖ ಉಮ್ಮಳಿಸಿ ಬಂತು. ಅದನ್ನ ತಡೆಯೋಕ್ಕೆ ಆಗ್ಲಿಲ್ಲ. ಅಲ್ಲೀ ಜನಗಳನ್ನು ಕಂಡು, ಮಾತಾಡ್ದೆ. ಆ ಜಾಗಗಳಿಗೆಲ್ಲಾ ಹೋಗಿ ಬಂದೆ. ಆಗ ಕಲಂಕಿನಿ ತಾಯಿಯಿಂದ ರೋಸಿದ, ದುಃಖಿತನಾದ ಚನ್ನಬಸವನಾಯಕನನ್ನ ಅಲ್ಲೇ ಪ್ರತ್ಯಕ್ಷ ಕಂಡ ಹಾಗೇ ಆಯ್ತು.

ಇವನೋ ಸ್ವಾಭಿಮಾನಿ, ಹೆಮ್ಮೆ ತುಂಬಿದ ಯುವಕ ಆದ್ರೆ ಸ್ವಾಭಿಮಾನಾನ ಕಾಪಾಡ್ಕೊಂಡು ಬರೋದಕ್ಕೆ ಆಗದಂಥ ಪರಿಸ್ಥಿತಿ. ಇಂಥ ಹುಡುಗನ್ನ ನಾನು ಅಲ್ಲಿ ನೋಡ್ದೆ. ಆ ಹೆಂಗಸನ್ನೂ ಕಂಡೆ. ನನ್ನ ಮನಸ್ಸಿಗೆ ನೋವಾಯ್ತು. ಇವಳ್ನ ಯಾರಾದ್ರೂ ಕೊಂದ್ರೂ ಪರ್ವಾಗಿಲ್ಲ ಅನ್ನಿಸ್ತು. ಸುಂದರ, ಆಕರ್ಷಕ ನಂಬಯ್ಯನ್ನ ಕಂಡೆ. ಗಂಡನ್ನ ಕಳ್ಕೊಂಡ ಆ ಚಿಕ್ಕ ವಯಸ್ಸಿನ ವಿಧವೇನೂ ಕಂಡೆ. ಅಪಾಯದ ಪರಿಸ್ಥಿತಿ !

ಹೀಗೆ ಇಡೀ ಕತೆ ತನ್ನಿಂತಾನೇ ಬೆಳೀತು. ನಾನು ಏನೂ ಮಾಡಿಲ್ಲ. 'ಚಿಕ್ಕವೀರರಾಜೇಂದ್ರ'ನೂ ಹಾಗೆ. ಕೊನೆಗೆ ಕತೆ ಹೀಗೆ ಮುಗಿಯತ್ತೆ

ಅನ್ನೋದು ನಂಗೊತ್ತಿರಲಿಲ್ಲ. ಕುಂಟ ಬಸವ ಸಾಯ್ತಾನೆ. ಚಿಕ ವೀರರಾಜ ಸಿಂಹಾಸನ ಬಿಡ್ತಾನೆ–ಇಷ್ಟು ಗೊತ್ತಿತ್ತು. ಆದರೆ ಇವೆಲ್ಲ ಹೇಗೆ ಆಗತ್ತೆ ? ಬರೆದು ಮುಗಿಸೋವರೆಗೂ ನಂಗೂ ಗೊತ್ತಿರಲಿಲ್ಲ.

ರಾವ್ : ಗಮನಾರ್ಹವಾದ್ದು ಏನಪ್ಪ ಅಂದರೆ ಕಾದಂಬರಿ ಓದ್ತಾ ಇದ್ರೆ ನಮಗೆ ಅದೃಶ್ಯವಾದ ಒಂದು ಕೈ ಆಡ್ತಾ ಇರೋ ಅರಿವು ಮೂಡತ್ತೆ. ಆದ್ರೂ ಪಾತ್ರಗಳಿಗೆ ತಮ್ಮದೇ ಆದ ಸ್ವಾತಂತ್ರ್ಯಾನೂ ಇದೆ ಅನ್ಸತ್ತೆ.

ಮಾಸ್ತಿ : ಹೌದು, ಅವುಗಳಿಗೆ ಸಂಪೂರ್ಣ ಸ್ವಾತಂತ್ರ್ಯ ಇದೆ.

ರಾವ್ : ಹೌದು, ಆ ಕಾದಂಬರಿಯ ವಿಶೇಷಾನೇ ಅದು. ಅದಕ್ಕೆ ಈಗ ಅನ್ನಿಸ್ತಿದೆ ಆ ಇಡೀ ಕಾದಂಬರಿ ಸೆರೆಮನೆಯ ಬೀಗ ತೆಗೆಯೋದರಿಂದ ಪ್ರಾರಂಭ ಆಗೋದು ತುಂಬ ಮಹತ್ವಪೂರ್ಣ ಅಂಶ. ಇಡೀ ದೇಶಾನೆ ಒಂದು ಸೆರೆಮನೆಯಾಗಿತ್ತು, ಆಗ.

ಮಾಸ್ತಿ : ಹೌದು. ಪ್ರಕೃತೇ : ಕ್ರಿಯ ಮಾಣಾನಿ ಗುಣೈಃ ಕರ್ಮಾಣಿ ಸರ್ವಶಃ। ಅಹಂಕಾರ ವಿಮೂಢಾತ್ಮಾ ಕರ್ತಾಹಮಿತಿ ಮನ್ಯತೇ ॥ ಇದು ಭಗವದ್ಗೀತೆಯ ಒಂದು ಶ್ಲೋಕ. ನಾವೇನು ಆಗಿರ್ತೀವೊ, ನಾವೇನು ಮಾಡ್ತೀವೊ ಅವೆಲ್ಲ ನಮ್ಮ ಪ್ರಕೃತಿಗುಣದ ಮೇಲೆ ಹೋಗುತ್ತೆ. ಅಲ್ಲಿ ಸ್ವಾತಂತ್ರ್ಯ ಇಲ್ಲ. ಅತ್ಯಂತ ವಿವೇಕಿಯೂ ಪ್ರಕೃತಿಗುಣವನ್ನ ಅವಲಂಬಿಸಿರ್ತಾನೆ. ಆದ್ದರಿಂದ ನಿಯಂತ್ರಣ ಏನು ಮಾಡಿದ ಹಾಗಾಯ್ತು ? ಏನಿಲ್ಲ. ಮನುಷ್ಯ ಸ್ವಭಾವವನ್ನೇ ಬದ್ಲು ಮಾಡ್ಕೊಳಕ್ಕೆ ಆಗಲ್ಲವಲ್ಲ. ಸಕಲ ಜೀವಗಳೂ ತಮ್ಮ ತಮ್ಮ ಪ್ರಕೃತಿ ಗುಣವನ್ನ ಅವಲಂಬಿಸಿಯೇ ನಡೆಯೋದು. ಅದಕ್ಕೇ ಉಮರ್ ಖಯ್ಯಾಂ ಹೇಳಿದಾನೆ "ಸ್ವತಃ ನೀನು ಕೊಟ್ಟಿರೋ ಸ್ವಭಾವದಿಂದ ಹುಟ್ಟಿದ ಈ ನನ್ನ ತಪ್ಪುಗಳನ್ನು ಕ್ಷಮಿಸು, ಇಲ್ಲ ನಿನ್ನನ್ನೇ ಕ್ಷಮಿಸಿಕೋ ! (ನಗು) ನೀನು ಯಾಕೆ ನನ್ನ ಹೀಗೆ ಸೃಷ್ಟಿ ಮಾಡ್ದೆ ?" ಅದೇ ತಿಳ್ಕೊಬೇಕಾದ್ದು–ನಾವು ಬದುಕಿರೋ ಈ ಪ್ರಪಂಚದಲ್ಲಿ ತಪ್ಪು ಮಾಡೋದೇ ನಿಜಸ್ಥಿತಿ. ತಪ್ಪು ಮಾಡೋದನ್ನ ತಪ್ಪಿಸಿಕೊಳ್ಳೋದು ಅಪರೂಪದ ವಿಷಯ. ಹೀಗಾಗಿ ಯಾರೋ ನಮ್ಮನ್ನ ಕಾಯ್ತಾರೆ ಅನ್ನೋದು ಸಮಾಧಾನದ ಸಂಗತಿ, ನಾವು ತಪ್ಪು ಮಾಡ್ದೆ ಇರೋಕೆ ಆಗಲ್ವಲ್ಲಾ ಅನ್ನೋದು ಎದೆ ಒಡೆಯೋ ಸಂಗತಿ.

ರಾವ್ : ಸರ್, ನಿಮ್ಮ ಮೊದಲನೆ ಚಾರಿತ್ರಿಕ ಕಾದಂಬರಿಯಲ್ಲಿ, ಈ ಭಾಗ ಕೊನೆಯ ಸಾಲಿನ ಕಾದಂಬರಿಯಲ್ಲಿ ಅದಮೇಲೆ ಬರಬೇಡ. ಕ್ರೂರ ಅಂತ ಹೇಳ

ಬಹುದಾದ ಯಾವ ಪಾತ್ರಾನೂ ಇಲ್ಲ. ಕೇಂದ್ರ ಪಾತ್ರವಾದ ಚಿಕವೀರರಾಜನನ್ನ ಹೇಗೆ ಸೃಷ್ಟಿ ಮಾಡಿದ್ರಿ ಸರ್ ?

ಮಾಸ್ತಿ : ಯಾಕೆ, 'ಚನ್ನಬಸವ ನಾಯಕ'ದ ನಿಂಬಯ್ಯ ಕ್ರೂರಿ ಅಲ್ವೇನು? ಎಷ್ಟೊಂದು ಕ್ರೌರ್ಯದಿಂದ ಕೊಲ್ತಾನೆ ಅವನು.

ರಾವ್ : ಆದರೆ ಚಿಕವೀರರಾಜನಷ್ಟು ಹೇಸಿಗೆ ತರಿಸೋ ಕ್ರೂರಿ ಅಲ್ಲ.

ಮಾಸ್ತಿ : ರಾಜನ್ನೇ ಕೊಲ್ಲೋ ಪ್ರಯತ್ನ ಮಾಡ್ತಾನೆ. ಅವನು ಕ್ರೂರಿ ಅಲ್ವೇನು ? ಬಹಳ, ಬಹಳ ಕ್ರೂರಿ. ನನ್ನ ಪಾತ್ರಗಳನ್ನ ದ್ವೇಷಿಸ ಬಾರ್ದು ಅಂತ ಎಷ್ಟೋ ಪ್ರಯತ್ನ ಮಾಡಿದೀನಿ. ಆದ್ರೆ ಇವನನ್ನ ಮಾತ್ರ ನಿಜವಾಗ಼್ೂ ದ್ವೇಷಿಸ್ತೀನಿ. (ನಗು).

ರಾವ್ : ಹಾಗಾದ್ರೆ ಚಿಕವೀರರಾಜನ್ನ ಯಾವ ದೃಷ್ಟೀಲಿ ಕಾಣ್ತೀರಾ ಸರ್ ?

ಮಾಸ್ತಿ : ಅವನ ಬಗ್ಗೆ ನಂಗೆ ಯಾವತ್ತೂ ಅನುಕಂಪ. ದೇವರು ಕೊಟ್ಟಿದ್ರೆ, ಅಷ್ಟು ಒಳ್ಳೆ ಹುಟ್ಟು, ಮನೆತನದ ಅವನು ಎಷ್ಟೆಲ್ಲಾ ಬೆಳೀಬಹು ದಾಗಿತ್ತು. ಆದ್ರೆ ಅವನ ವಿಧಿ ಅವನನ್ನ ತಪ್ಪುದಾರಿಗೆ, ತಳಾತಳಕ್ಕೆ ಎಳ್ಕೊಂಡು ಹೋಯ್ತು. ಅವನನ್ನ ತಡೆಯೋರು ಇಲ್ಲದ ಹಾಗಾಯ್ತು. ತುಂಬಾ ಪಾಪ ಅನಿಸುತ್ತೆ ಚಿಕವೀರರಾಜೇಂದ್ರನ್ನ ನೋಡಿದ್ರೆ.

## 'ಶ್ರೀರಾಮ ಪಟ್ಟಾಭಿಷೇಕ'

ರಾವ್ : ನಿಮ್ಮ ಇನ್ನೊಂದು ಕೃತಿ 'ಶ್ರೀರಾಮ ಪಟ್ಟಾಭಿಷೇಕ'ದ ಬಗ್ಗೆ ಎರಡು ಮಾತು ಹೇಳ್ತೀರಾ ಸರ್ ? ನೀವು ಈಗಾಗ್ಲೇ 'ಆದಿಕವಿ ವಾಲ್ಮೀಕಿ' ಬರೆದಿದಿರಾ. ಇತರ ಭಾಷೆಗಳಿಗೆ ಅನುವಾದ ಆಗಬೇಕು, ಆ ಪುಸ್ತಕ. ರಾಮಾಯಣವನ್ನ ಕುರಿತ ಕ್ಲಾಸಿಕ್ ಅದು. ನಿಮ್ಮ 'ಶ್ರೀರಾಮ ಪಟ್ಟಾಭಿಷೇಕ'ಕ್ಕೆ ಸಿಗಬೇಕಾದಷ್ಟು ಗಮನ ಸಿಕ್ಕಿಲ್ಲ ಅಂತ ನಂಗನ್ಸುತ್ತೆ. ಕತೇನ ನೀವು ನೋಡಿರೊ ದೃಷ್ಟೀನೇ ಬಹಳ ವಿಭಿನ್ನವಾಗಿದೆ.

ಮಾಸ್ತಿ : ನೀವು ಇದರ ಬಗ್ಗೆ ಬರ್ದಿದೀರಿ ಅಂತ ಗೊತ್ತು. ಅದು ರಾಮನ ಕತೆ ಅಂತ ಹೇಳಿದೀರಿ ನೀವು. ಆದ್ರೆ ರಾಮನ ಕತೆ ಹೇಳಬೇಕು ಅನ್ನೋದು ನನ್ನ ಉದ್ದೇಶ ಆಗಿರ್ಲಿಲ್ಲ. ರಾಮಂಗೆ ಪಟ್ಟಾಭಿಷೇಕ ಆದಾಗ ಇದ್ದ ಪರಿಸ್ಥಿತಿ ಎಂಥದ್ದು, ಆಗ ಅವನ ಸುತ್ತ ಜನ ಹೇಗಿದ್ರು– ಅದನ್ನ ಚಿತ್ರಿಸೋದು ನನ್ನ ಉದ್ದೇಶ. ಕಾವ್ಯ ಬರ್ದಾಗ ಅದರ ಬಗ್ಗೆ ಯೋಚ್ನೆ ಮಾಡ್ಲಿಲ್ಲ. ಈಗ ಹೊರಗಿನಿಂದ ನೋಡಿದಾಗ ಅನ್ನಿಸುತ್ತೆ ; ಈತ ಒಂದು ಉದಾತ್ತ ತ್ಯಾಗದಿಂದ ತಾನು ಮಾತ್ರ ದೇವತ್ವಕೆ ಏರೋದಲ್ದೆ, ಮಂಥರೆ, ಕೈಕೇಯಿ ಅಂಥ ಹೆಂಗಸರನ್ನೂ ದೈವಿಕವಾಗಿ

ಮಾಡಿದ. ತನ್ನ ಅತಿದ್ವೇಷಿ ಶತ್ರು ಮಂಥರೇನೂ ಹೇಗೆ ಸ್ನೇಹಮಯಿ ಮಾಡಿಬಿಟ್ಟ ನೋಡಿ ! (ನಗು).

ರಾವ್ : ಹೌದು, ತಾರಾದೇವಿ ತರದ ಸಣ್ಣ ಪುಟ್ಟ ಪಾತ್ರಗಳೂ ನಮ್ಮ ಸಂಸ್ಕೃತಿಯ ತಿರುಳನ್ನ ಒಳಗೊಂಡಿವೆ.

ಶಾಸ್ತ್ರಿ : ಓ! ಅದ್ಭುತವಾದ ಹೆಂಗಸು. ಆಕೆ ಪಾತ್ರ ಸರಿಯಾಗಿ ಮೂಡಿ ಬಂದಿಲ್ಲ. ನಮ್ಮವರ ಬಗ್ಗೇನೇ ಈ ಮಾತು ಹೇಳಕ್ಕೆ ಬೇಜಾರಾಗತ್ತೆ. ಆದ್ರೂ ನಾವು ರಾಮಾಯಣಕ್ಕೆ ಅರ್ಹರಲ್ಲ. ರಾಮಾಯಣ ಬಂದ ನಂತರದ ಜನಕ್ಕೆ ಅದರ ಬೆಲೆ ಗೊತ್ತಿಲ್ಲ. ಅದಕ್ಕೆ ಅವರು ಸೀತೆಯನ್ನು ಕಳ ಕೊಂಡ ರಾಮ ಹಲುಬಿದ, ಅತ್ತ ಅಂತೆಲ್ಲಾ ಹೇಳಿದಾರೆ. ಅಲ್ಲಿರೋ ಆರೇಳು ಸರ್ಗಗಳು ಸರಿಯಿಲ್ಲ. ಕೆಲವು ಶ್ಲೋಕಗಳು ಮಾತ್ರ ಸರಿ. ರಾಮಂಗೆ ಬೇಸರ ಆಯ್ತು, ನಿಜ. ಆದರೆ ಅವನು ಹಾಗೆ ಮನಸ್ಸು ಕೆಡಿಸಿಕೊಳ್ಳಲಿಲ್ಲ. ಮೂರ್ಖನ ಹಾಗೆ ಆಡಲಿಲ್ಲ.

ರಾಮ ಅದ್ಭುತ ಮನುಷ್ಯ. ಅದಕ್ಕೇ ಅವನನ್ನು ದೇವರು ಅಂತೀವಿ. ಯಾಕೆ ? ದೇವರು ನಿಂಗೆ ಬೇರೆ ನಂಗೆ ಬೇರೇನೋ ? ದೇವರು ಅಂದ್ರೆ ಬರೀ ಮನುಷ್ಯ ಅಲ್ಲ. ಅದಕ್ಕಿಂತ ಹೆಚ್ಚಿನವನು. ಎಲ್ಲ ಜೀವವೂ ಅವನೇ. ನಮ್ಮ ಪುರಾಣದಲ್ಲಿ ಇಲ್ವೇನು ? (ನಗು) ಮೊದಲು ಮತ್ಸ್ಯ, ಮೀನು ಹಂದಿ ಕೂಡ ಆಗಿದ್ದ. ಆದ್ದರಿಂದ ದೇವರು ಅಂದರೆ ಸಮಸ್ತ ಜೀವಕೋಟಿಯ ಒಳಿತಿಗೆ, ತೃಪ್ತಿಗೆ, ಜೀವನದ ಋತವನ್ನ ನಡಸೋಕೆ ಎಂತಹ ತ್ಯಾಗ ಬೇಕಾದ್ರೂ ಮಾಡೋ ಅಂಥವನು. ಒಂದು ಸಲ ಮಾತು ಕೊಟ್ಟ ಮೇಲೆ ಏನೇಆಗ್ಲಿ ಅದನ್ನ ಅವನು, ಅವನ ಮಕ್ಕಳು, ಮೊಮ್ಮಕ್ಕಳು ಎಲ್ರೂ ನಡೆಸಲೇ ಬೇಕು. ಕೊಟ್ಟ ಮಾತನ್ನು ಉಳಿಸಿಕೊಳ್ಳೋದು ಬದುಕಿನಲ್ಲಿ ಬಹಳ ಮುಖ್ಯ.

ತಂದೆ ಬೇಡ ಅಂತ ಹೇಳಿದ್ರೂ, ತಂದೇ ಮಾತನ್ನ ಉಳಿಸೋದಕ್ಕೆ ಕಾಡಿಗೆ ಹೋಗೋದಕ್ಕೂ ಸಿದ್ಧವಾಗ್ತಾನೆ ರಾಮ, ದಶರಥ "ನನ್ನ ಮಾತನ್ನ ತಳ್ಳಿ ಹಾಕು, ಕಾಡಿಗೆ ಹೋಗೋದಕ್ಕೆ ಒಪ್ಕೋಬೇಡ" ಅಂತ ಹೇಳ್ತಾನೆ. ಆದರೆ ರಾಮ ಹೇಳ್ತಾನೆ: "ಇಲ್ಲ. ನಿನ್ನ ಮಾತು ಸಲ್ಲಬೇಕು. ನೀನು ಇನ್ನು ಸಾವಿರ ವರ್ಷ ಬದುಕಿದ್ರೂ ನಿನ್ನ ಮಾತು ನಡೀ ಬೇಕು. ನಾನು, ನನ್ನ ತಮ್ಮಂದಿರು ನಿನ್ನ ಪಾದ ಸೇವಕರು. ನಿನ್ನ ಮಾತನ್ನು ನಡೆಸಿಕೊಡ್ತೀವಿ. ನೀನೂ ಕೂಡ ನನ್ನ ತಡೀ ಬಾರ್ದು. ಮಾತು ಕೊಟ್ಟಿದೀಯಾ. ಅದನ್ನ ಮುರಿದು ಸುಳ್ಳು ಗಾರನಾಗೋದಕ್ಕೆ ನಾನು ಬಿಡೋದಿಲ್ಲ." ಎಂಥಾ ದೊಡ್ಡ ಮಾತು ?

ಇದೆಲ್ಲಾ ಯಾವಾಗ ನಡೆದಿದ್ದು ? 10,000 ವರ್ಷಗಳ ಹಿಂದೆ, ಎಲ್ಲಿ ? ನಮ್ಮ ಈ ದೇಶದಲ್ಲಿ (ನಗು) ಇನ್ನು ಯಾವ ದೇಶಕ್ಕೆ ತಾನೆ ಇಷ್ಟು ಪುರಾತನವಾದ ಪರಂಪರೆಯ, ಈ ಅದ್ಭುತ ಕಲ್ಪನೆಯ ಹೆಗ್ಗಳಿಕೆ ಇದೆ ಹೇಳಿ ? ಅದಕ್ಕೆ ಸಕಾರಣವಾಗೇ ನಾನು ನಮ್ಮ ದೇಶದ ಬಗ್ಗೆ ಹೆಮ್ಮೆ ಪಟ್ಕೋಳೋದು. ಇಂಥ ದೇಶದಲ್ಲಿ ಹುಟ್ಟಿರೋದು ನಮಗೆಲ್ಲಾ ಒಂದು ಹೆಮ್ಮೆ ವಿಷಯ. ನಮ್ಮವನೇ ಆದ ವ್ಯಾಸ, ನಂತರದ ಕಾಳಿದಾಸ, ಕುಮಾರವ್ಯಾಸ ಎಂಥ ಜನ ! ಎಂಥ ವಿಚಾರಗಳು ! ಎಂಥ ಉದಾತ್ತ ಕಲ್ಪನೆಗಳು ! ಎಂಥ ಸುಕೋಮಲ ಸ್ವಭಾವದವರು ಇವರೆಲ್ಲ ! (ನಗು).

ರಾವ್ : ನಿಮ್ಮ ಕೃತಿಗಳ ಹಿಂದೆ ಇದ್ದು, ಅವುಗಳನ್ನು ಬೆಳಗಿಸೋ ಕಾಣ್ಕೆಗೆ ಮುಖ್ಯವಾಗಿ ಎರಡು ಮುಖಗಳಿವೆ ಅಂತ ನಾನು ಅನ್ಕೊಂಡಿದೀನಿ ಸರ್: ಒಂದು, ಬುದ್ಧ, ಯಶೋಧರಾ ಮುಂತಾದವರಲ್ಲಿ ಕಂಡು ಬರೋ ಹಾಗೆ, ಮಾನವನ ಶ್ರೇಷ್ಠನಾಗಬಲ್ಲ ಶಕ್ತಿಯನ್ನು ಗುರುತಿಸಿ ರೋದು; ಎರಡು, ಪ್ರತಿಯೊಬ್ರೂ ತಪ್ಪು ಮಾಡೇಮಾಡ್ತಾರೆ, ಆದ್ದರಿಂದ ಕ್ಷಮೆಗೆ ಅರ್ಹರು ಅನ್ನೋದನ್ನ ಕಂಡುಕೊಂಡಿರೋದು. 'ಶ್ರೀರಾಮ ಪಟ್ಟಾಭಿಷೇಕ' ದಲ್ಲಿ ಸೀತೆ ಬಾಯಲ್ಲಿ ಈ ಮಾತು ಬರತ್ತೆ, ಅಲ್ವ ಸರ್ ?

ಮಾಸ್ತಿ : ಹೌದು. ರಾಮಾಯಣಾನೇ ಈ ಮಾತನ್ನ ಹೇಳತ್ತೆ. ಸೀತೇ ಸುತ್ತ ಕಾವಲಿದ್ದ ಹೆಂಗಸರು ಅವಳನ್ನ ಹೇಯವಾಗಿ ಕಾಣೋದನ್ನ ನೋಡಿದ ಹನುಮಂತ "ಈ ಹೆಂಗಸರು ನಿಂಗೆ ಬಹಳ ಕಷ್ಟ ಕೊಟ್ಟಿದ್ದಾರೆ ತಾಯಿ. ಇವರಿಗೆಲ್ಲಾ ಶಿಕ್ಷೆ ಮಾಡಲಾ ?" ಅಂತ ಕೇಳಿದಾಗ, ಸೀತೆ "ಬೇಡ, ಅವರೇನು ತಾನೆ ಮಾಡಿದ್ರೂ ? ಅವರು ತಮ್ಮ ಒಡೆಯನ ಅಪ್ಪಣೇನ ನಡೆಸಿದರು. ಅದನ್ನ ಅವರು ನಡೆಸಕೂಡದಾಗಿತ್ತೇನು ? ನನ್ನ ಯಾರು ದೂಷಿಸಲಿಲ್ಲ. ನನ್ನ ಪಾಲಿಗೆ ಬಂದಿದ್ದು ಅದು. ಆದ್ದರಿಂದ ನಂಗೆ ಬೇಸರ ಆಗ್ಲೇ ಬೇಕಾಗಿತ್ತು. ಅವರು ಅದನ್ನ ಉಂಟು ಮಾಡಿದ್ರು, ಅಷ್ಟೆ." ಅಂತ ಹೇಳುತ್ತಾಳೆ.

ರಾವ್ : ಸರ್, ಈ ಮಹಾಕಾವ್ಯದಲ್ಲಿ, ಸರಳರಗಳೆಯನ್ನು ಉಳಿಸಿದೀರಿ. ಕನ್ನಡದಲ್ಲಿ ಇದನ್ನ ಬಳಿಸಿದವರಲ್ಲಿ ಬಹುಶಃ ನೀವೆ ಮೊದಲಿಗರು ಅಂತ ಕಾಣತ್ತೆ, ಅಲ್ವೆ ?

ಮಾಸ್ತಿ : ಹೌದು, ನಾನೇ ಆರಂಭಿಸಿದ್ದು.

ರಾವ್ : ಈ ಒಂದು ಮಾಧ್ಯಮವನ್ನು ಹೇಗೆ ಸರ್, ಶುರುಮಾಡ್ಕೊಂಡ್ರಿ ?

ಮಾಸ್ತಿ : ಆಗ ಮಧುಗಿರೀಲಿ ಇದೆ. 'ಹ್ಯಾಮ್ಲೆಟ್'ನ ಅನುವಾದ ಮಾಡಬೇಕು

ಅನ್ನೋ ವಿಚಾರ ಇತ್ತು ಮನಸ್ಸಿನಲ್ಲಿ. ಕಾಲೇಜಿನಲ್ಲಿ ಓದ್ತಾ ಇದ್ದಾಗ್ಲೇ 'ಹ್ಯಾಮ್ಲೆಟ್'ಗೆ ಮನ ಸೋತಿದ್ದೆ ನಾನು. ಅದನ್ನ ಪಠ್ಯಪುಸ್ತಕವಾಗಿ ಅಭ್ಯಾಸ ಮಾಡಿದ್ದೆ. ಅದರ ಅನುವಾದಕ್ಕೆ ತಕ್ಕ ಒಂದು ಛಂದೋರೂಪದ ಬಗ್ಗೆ ಯೋಚಿಸಿದ್ದೆ. ಶೇಕ್ಸ್‌ಪಿಯರ್‌ನ ಪದ್ಯರೂಪವನ್ನು ಉಳಿಸಿಕೊಂಡು, ಆ ವಸ್ತುವಿಗೆ, ಮಹಾಕಾವ್ಯ ಸ್ವರೂಪಕ್ಕೆ ಹೊಂದಬಹುದಾದ ಛಂದೋರೂಪದಲ್ಲಿ ಬರೀಬೇಕು ಅಂತ ಯೋಚ್ನೆ ಮಾಡ್ತಿದ್ದೆ.

ಒಂದಿನ ಬೆಳಿಗ್ಗೆ 'To be or not to be' ಸಾಲಿನ ಗುಂಗು ಹಿಡೀತು. ಎಷ್ಟೋ ರೀತಿಯ ರೂಪಗಳು ಮನಸ್ಸಿನಲ್ಲಿ ಹಾದು ಹೋದ್ವು, ಕಡೆಗೆ 'ಉಳಿಯುವುದೆ, ಅಳಿಯುವುದೆ, ಅದುವೆ ಸಮಸ್ಯೆ," ಅನ್ನೋ ರೂಪ ಮನಸ್ಸಿಗೆ ಹಿಡಿಸಿತು. ಈ ಸಾಲು ಇಂಗ್ಲಿಷ್‌ನ (blank verse) ಬ್ಲ್ಯಾಂಕ್ ವರ್ಸ್‌ಗೆ ಸಂವಾದಿ ಆಗಬಲ್ಲುದು ಅನ್ನಿಸಿತು. ಇದನ್ನೇ ಬೆಳೆಸಬೇಕು ಅನ್ನಿಸಿ, ಹಾಗೇ ಮುಂದುವರೆಸಿದೆ.

ಮೊದಲು, ಆ ಮೂರು ಹಳ್ಳಿಗಳ ಹೆಸರಿನ ಬಗ್ಗೆ ಒಂದು ಕವಿತೆ ಇದೆಯಲ್ಲಾ, ಆದನ್ನ ಸರಳರಗಳೇಲಿ ಬರೆದೆ. ಚೆನ್ನಾಗಿ ಬಂತು ಅನ್ನಿಸ್ತು. ಆದು ಅಷ್ಟೊಂದು ಯಶಸ್ವಿ ಆಗಬಹುದು ಅಂತ ನಂಗೊತ್ತಿರ ಲಿಲ್ಲ. ಪ್ರಕಟ ಮಾಡಿದಾಗ, ಎಷ್ಟೊ ಜನ ನಕ್ಕಿದ್ದೂ ಉಂಟು. ಪುತ್ತೂರಿನ ಶಂಭುಶರ್ಮ ಹೇಳಿದರು : ಏನಿದು ಒಳ್ಳೇ ಸಂಕ್ರಾಂತಿ ಪುರುಷನ ನಡಿಗೆ ಗತಿಯಲ್ಲಿದೆ ? ಬಿರಿಹುಯ್ದು ಕೂದ್ಲು ಬಿಟ್ಕೊಂಡು. ತೋಳುಗಳನ್ನು ಬೀಸ್ತಾ, ಕಣ್ಣುಗಳನ್ನ ತಿರುಗಿಸ್ತಾ ಇರೋ ಹಾಗಿದೆ." ಆದಕ್ಕೆ ನಾನು ನಕ್ಕು ಬಿಟ್ಟೆ.

ರಾವ್ : ಸುನೀತವನ್ನ ಬಳಸಿದವರಲ್ಲೂ ನೀವೇ ಮೊದಲಿಗರಲ್ವಾ ಸರ್ ?

ಮಾಸ್ತಿ : ಅಲ್ಲ. ಸುನೀತವನ್ನ ಕುವೆಂಪು, ಬಹುಶಃ ಗೋವಿಂದಪೈ ಆವರೆಲ್ಲಾ ಅಷ್ಟೊತ್ತಿಗೆ ಆಗ್ಲೇ ಬಳಸಿದ್ರು. ಆದ್ರೆ ನಾನು ಅದನ್ನ ನನ 'ಕಲ್ಪನೆ' ಮತ್ತು ನನ್ನ 'ಭಾವನೆ' ಎರಡನ್ನೂ ವ್ಯಕ್ತ ಪಡಿಸೋದಕ್ಕೆ ಬಳಸಿದೆ. ಈ ಉದ್ದೇಶಕ್ಕೆ ನಾನು ಯಾವತ್ತೂ ಗದ್ಯವನ್ನು ಬಳಸಿಲ್ಲ. ನನ್ನ ಗದ್ಯ ಹಾಗೆ ಒಂದೊಂದು ಸಲ ಭಾವನೆ, ಕಲ್ಪನೆ ಎರಡನ್ನೂ ವ್ಯಕ್ತ ಮಾಡಿರೋದುಂಟು. ಒಂದು ಹೂವು, ಒಂದು ಹಕ್ಕಿ ಹೀಗೇ ಯಾವುದಾದ್ರೂ ದೃಶ್ಯ ನೋಡಿದಾಗ, ಅದು ನನ್ನ ಬುದ್ಧಿ ಮತ್ತು ಭಾವನೆ ಎರಡಕ್ಕೂ ಬಹಳ ಮುಖ್ಯ ಆಗಿಬಿಡತ್ತೆ. ಅದರಿಂದ ನಂಗೆ ತೃಪ್ತೀನೋ ಅತೃಪ್ತೀನೋ ಉಂಟಾಗುತ್ತೆ. ಅದನ್ನ ಪದ್ಯ ಬರೆಯೋದಕ್ಕೆ ಬಳಸಿಕೊಳ್ತೀನಿ. ಸರಳ ರಗಳೆ ಅಂದ್ರೆ ಒಳ್ಳೆ

ಛಂದೋಗತೀಲಿ ಮಾತಾಡಿದ ಹಾಗಿರತ್ತೆ ಅಂತೆ ನಂಗೆ ಗೊತ್ತಾಯ್ತು
ಅದೃಶ್ಯವಾದ, ಅತಡೆ ಒಡ್ಡದ ಈ ಲಯದಲ್ಲಿ ಒಂದು ನಿಯತಗ
ಇದೆ.

## ಸಾಹಿತ್ಯ ವಿಮರ್ಶೆ

ರಾವ್ : ಸರ್, ನಂಗೆ ತಿಳಿದಿರೋ ಮಟ್ಟಿಗೆ, ಆಧುನಿಕ ಕನ್ನಡ ಸಾಹಿತ್ಯ
ಸಂದರ್ಭದಲ್ಲಿ ಮೊದಲು ಸಾಹಿತ್ಯ-ವಿಮರ್ಶೆಯ ಕಾರ್ಯವನ್ನು ಚಚ
ಮಾಡಿದವರು ನೀವೇ.

ಮಾಸ್ತಿ : ಹೌದು, ಹೌದು, ಹೌದು.

ರಾವ್ : ಮತ್ತೆ ನಿಮ್ಮ ಬರವಣಿಗೇಲೇ ಭಾರತೀಯ ಕಾವ್ಯಮೀಮಾಂಸೆ ಹಾಗ
ಮ್ಯಾಥ್ಯೂ ಅರ್ನಾಲ್ಡ್‌ನ ಪ್ರಭಾವಗಳ ಗಮನಾರ್ಹ ಸಮನ್ವ
ಕಂಡು ಬರತ್ತೆ. ಇಷ್ಟಾದ್ರೂ ಅದು ಪಾಶ್ಚಿಮಾತ್ಯ ಪ್ರಭಾವದಿ
ಮುಕ್ತವಾಗಿದೆ. ಇವತ್ತಿನ ಸಂದರ್ಭದಲ್ಲಿ ವಿಮರ್ಶೆಯ ಕೆಲಸ ಏ
ಅಂತ ಹೇಳ್ತೀರಾ ಸರ್ ?

ಮಾಸ್ತಿ : ಹಿಂದೆ ಹೇಳಿದ್ದೇ. ಬರಹಗಾರನ ಕೃತಿಯನ್ನು ಮೊದಲಿಂದ ಓ
ನೋಡಿ, ಅವನ ಜತೆ ಸ್ನೇಹಭಾವದಿಂದ ಇರಬೇಕು. ಅವನ
ಸಹೃದಯತೆಯಿಂದ ಅರ್ಥ ಮಾಡ್ಕೊಂಡು. ಅವನೇನು ಹೇಳಬೇ
ಅಂತ ಇದಾನೋ ಅದನ್ನ ಬೇರೆ ರೀತೀಲಿ ಹೇಳಬೇಕು. ಅವ
ಪದ್ಯ ಬರೀಲಿ, ನಾಟಕ ಬರೀಲಿ-ಅದರ ಹಿಂದೆ ಯಾವುದೋ ಒಂ
ಆಲೋಚನೆ ಇರತ್ತೆ. ಅದನ್ನ ವಿಮರ್ಶಕ ತನ್ನ ಮಾತಿನಲ್ಲೇ ಹ
ಬೇಕು. ಅದರಲ್ಲಿ ಏನಾದ್ರೂ ಕುಂದು ಕೊರತೆ ಇದ್ರೆ ಅದ
ಸೂಕ್ಷ್ಮವಾಗಿ, ಸ್ನೇಹಪೂರ್ಣವಾಗಿ ಹೇಳಬೇಕು.
ಜೆಫ್ರೀಸ್ ಹಾಗಲ್ಲ.

ರಾವ್ : ಅಂದರೆ, ನ್ಯಾಯಾಧೀಶನ ಹಾಗಲ್ಲ,

ಮಾಸ್ತಿ : ಅಲ್ಲ. ಹಾಗೆ ಯಾವತ್ತೂ ಅಲ್ಲ. ವಿಶ್ವಾಸದಿಂದ ಹೇಳಬೇಕು ಸ
ಬ್ರೂಯಾತ್ ಪ್ರಿಯಂ ಬ್ರೂಯಾತ್ (ನಗು), ವಿಮರ್ಶಕ ತನಗೆ ಅ
ಸಿದ್ದನ್ನ ಖಂಡಿತ ಹೇಳಬೇಕು-ಆದರೆ ನೋಯೋ ಹಾಗೆ ಹೇಳಬಾರ
ಅವನು ತನ್ನೆಲ್ಲಾ ಬುದ್ಧಿವಂತಿಕೆಯಿಂದ, ಹೃದಯವಂತಿಕೆಯ
ಕೃತೀನ ಬೆಳಗಬೇಕು. ಅದು ಎಷ್ಟು ಸುಂದರವಾಗಿದೆ ಅಂತ ತೋರಿ
-ಬೇಕು. ಅದನ್ನ ಅವನು ಮಾತ್ರ ಮಾಡಕ್ಕೆ ಸಾಧ್ಯ. ಸಾಹಿತಿ
ಯಾಕೆ ಅಂದ್ರೆ ಒಬ್ಬ ಸಮರ್ಥ ವಿಮರ್ಶಕ ಮಾಡಬಹುದಾದ ಕೆ
ವನ್ನು ಕವಿ ಕೂಡ ಮಾಡಲಾರ. ಯಾಕೇಂದ್ರೆ ಅವನು ಕವಿ

ಹೆಚ್ಚಿನದನ್ನ ನೋಡಬಲ್ಲ. ಅರ್ಥ ಮಾಡ್ಕೊಬಲ್ಲ. ಹಾಗೆ ನೋಡಿದರೆ, ಸಾಹಿತಿಗೆ ಯಾವತ್ತೂ ತಾನು ಹೇಳ್ತಾ ಇರೋದರ ಸಂಪೂರ್ಣ ಅರಿವು ಇರೋದಿಲ್ಲ. ರಾಮಾಯಣದಲ್ಲಿ ವಾಲ್ಮೀಕಿಗೆ ಆಗಿದ್ದೇನು ? ಶಾಪಾನೇ ವರ ಆಯ್ತು. (ನಗು). ಅದು ವರ ಆಗುತ್ತೆ ಅನ್ನೋದು ಅವನಿಗೆ ಗೊತ್ತೇ ಇರಲಿಲ್ಲ. ಆದರಿಂದ್ಲೇ ಗೊತ್ತಾಗತ್ತೆ ನಮಗೆ. ಕವಿಗೆ ಯಾವತ್ತೂ ತನ್ನ ಕೃತಿಯ ಬಗ್ಗೆ ಪೂರ್ಣವಾಗಿ ಗೊತ್ತಿರಲ್ಲ ಅಂತ.

ಸಾಹಿತ್ಯದ ಕಾರ್ಯ

ರಾವ್ : ಸರ್, ಬಹಳ ತಾಳ್ಮೆಯಿಂದ ನನ್ನ ಎಲ್ಲಾ ಪ್ರಶ್ನೆಗಳಿಗೂ ಉತ್ತರ್ರ ಕೊಟ್ಟಿದೀರಾ ಕಡೇದಾಗಿ ಒಂದು ಪ್ರಶ್ನೆ, ಸರಳವಾದ, ಕಟ್ಟಿಗೆ ಒಡೆಯೋ ವೆಂಕಟಿಗನಂಥ ಪಾತ್ರಗಳಿಂದ ಹಿಡಿದು, ಉದಾತ ಪಾತ್ರಗಳಾದ ಶ್ರೀರಾಮ ಸೀತೆ, ಬುದ್ಧ ಇಂಥವರನ್ನ ನಿಮ್ಮ ಕೃತಿಗಳಲ್ಲಿ ಸೃಷ್ಟಿ ಮಾಡಿದೀರಾ. ನಮ್ಮ ಈಗಿನ ಈ ತಾಂತ್ರಿಕ, ವೈಜ್ಞಾನಿಕ ಯುಗದಲ್ಲಿ ಸಾಹಿತ್ಯದ ಕಾರ್ಯ ಏನೂಂತ ಅನ್ನಿಸತ್ತೆ ಸರ್ ?

ಮಾಸ್ತಿ : ವಿಜ್ಞಾನ, ತಂತ್ರಜ್ಞಾನ ಇವು ಸಾಹಿತ್ಯಕ್ಕೆ ಹೊರತಲ್ಲ. ವಿಜ್ಞಾನ ವನ್ನೂ ಹೇಳಿ, ಅದರಿಂದ ಅರಿವು ಮೂಡಿಸೋದೇ ಸಾಹಿತ್ಯ. ವಿಜ್ಞಾನವನ್ನ ಕುರಿತ ಹಕ್ಸ್‌ಲಿಯ ಪ್ರಬಂಧಗಳು ಸುಂದರವಾದ ಸಾಹಿತ್ಯವೇ. ಯಾವಾಗ ಒಬ್ಬ ವಿಜ್ಞಾನಿ ಜನ ಮೆಚ್ಚೋ ಹಾಗೆ ಬರೀತಾನೋ, ಆಗ ಅವನು ಸಾಹಿತಿ ಆಗ್ತಾನೆ.

ಸಾಹಿತ್ಯ ಮಾನವನ ವೈಯಕ್ತಿಕ ಅಭಿವ್ಯಕ್ತಿ, ಆಲೋಚನೆ, ಭಾವನೆ– ಈ ಎಲ್ಲವನ್ನೂ ಒಳಗೊಳ್ಳೊ ಅಂಥಾದ್ದು. ಆದ್ದರಿಂದ ಜ್ಞಾನದ ಎಲ್ಲ ಶಾಖೆಗಳನ್ನೂ ತನ್ನ ಸುಫರ್ದಿಗೆ ತೆಗೆದುಕೋ ಬೇಕಾದ್ದು ಸಾಹಿತ್ಯದ ಕೆಲಸ. (ನಗು) ಅಂದ್ರೆ ಹೇಳೋದನ್ನೇ ಮನಸ್ಸಿಗೆ ಹಿತ ಆಗೋ ಹಾಗೇ ಹೇಳಿದರೆ ಆಯ್ತು. ಧರ್ಮ, ವಿಜ್ಞಾನ–ಇವು ಸಾಹಿತ್ಯದಲ್ಲೇ ಇರೋ ಅಂಥವು, ಈ ಪ್ರಪಂಚದ ಎಲ್ಲವೂ ಸಾಹಿತ್ಯದ ಪರಿಧಿಯಲ್ಲೇ ಬರೋ ಅಂಥವು–ಚಿತ್ರಕಲೆ. ಶಿಲ್ಪಕಲೆ–ಎಲ್ಲವೂ. ಇವುಗಳನ್ನು ಕುರಿತು ಭಾಷೇಲಿ ಹೇಳಬಹುದು–ಮಾತು ಮಾತ್ರ ಈ ಕೆಲಸ ಮಾಡ ಬಲ್ಲದು,

ನಿಮಗೆ ಗೊತ್ತೇ ಇದೆ.-ಭಕ್ತಿ ಮಾರ್ಗ, ಜ್ಞಾನ ಮಾರ್ಗ, ಕರ್ಮ ಮಾರ್ಗಗಳಿವೆ. ಸಾಹಿತ್ಯ ನಾಲ್ಕನೇ ಮಾರ್ಗ ಅಂತೀನಿ. ಸಾಹಿತ್ಯ ಮಾರ್ಗ. ಮಾನವನನ್ನ ಈಗ ಅವನಿರೋ ಕತ್ತಲಿಂದ ಕಾಪಾಡ್ಕ ಬೇಕು ಸಾಹಿತ್ಯ. ಇದನ್ನ ಸಾಹಿತ್ಯ ಮಾಡಬಲ್ಲದು. ಆದ್ರೆ ಧರ್ಮಕೆ

ಸಾಧ್ಯ ಇಲ್ಲ. ಯಾಕೆ ಅಂದರೆ ಅವರವರೆ ಜಗಳ ಆಡ್ತಾರೆ. ಅದ
ಕಾರಣಕ್ಕೇ ತತ್ವಜ್ಞಾನಿಗಳೂ ಈ ಕೆಲಸ ಮಾಡಲಾರ್ರು. ವಿಜ್ಞಾ
ಬಹಳವಾಗಿ ಬಾಹ್ಯ ಜೀವನವನ್ನು ಕುರಿತದ್ದು. ಅದಕ್ಕೋಸ್ಕ
ಅದರಿಂದಲೂ ಸಾಧ್ಯವಿಲ್ಲ. ಬಾಹ್ಯಜೀವನವನ್ನ ಅಲುಗಾಡಿಸದ
ಒಳಹೊಕ್ಕು. ಧರ್ಮ, ತತ್ವಜ್ಞಾನ ಹೇಳೋದನ್ನ ಸಾಹಿತ್ಯ ಹೇ
ಬಲ್ಲದು. ಅಲ್ದೆ, ಹೇಳೋವಾಗ ಎಂಥ ಜನ ಸಾಮಾನ್ಯನಿಗ
ಅರ್ಥವಾಗೋ ಹಾಗೆ ಹೇಳ ಬಲ್ಲದು, ಒಟ್ಟಾರೆ, ಮಾನವ ಜೀವ
ವನ್ನ ಉದ್ಧಾರ ಮಾಡೋ ಶಕ್ತಿ ಇರೋದು ಸಾಹಿತ್ಯಕ್ಕೆ ಮಾತ್ರ
ಧರ್ಮ, ತತ್ವಜ್ಞಾನ ಇವು ಬುದ್ಧಿವಂತರಿಗೆ. ಜನ ಸಾಮಾನ್ಯನಿ
ಸಾಹಿತ್ಯವೊಂದೇ ಮಾರ್ಗ.
ಆದ್ದರಿಂದ ಸಾಹಿತ್ಯದ ಕೆಲಸ ಏನು ಅಂದರೆ, ಮಾನವನನ್ನ ಅವ
ಪಶುವೃತ್ತಿಯಿಂದ ಮೇಲೆತ್ತಿ ದೈವತ್ವದ ಕಡೆಗೆ ಕರೆದೊಯ್ಯೋದು.

........ಇದು (ಭಾವ) ನನ್ನ ಜೀವನ ಚರಿತೆಯಲ್ಲ: ನನ್ನ ಬಾಳುವೆಯನ್ನು ಕುರಿತು ನನಗೆ ತೋರಿರು
ಭಾವ. ಚರಿತೆಯಾಗಿ ಜನರ ಗಮನಕ್ಕೆ ಅರ್ಹವಾಗಬಹುದಾದ ಸಂಗತಿಗಳ ಒಂದು ಜೀವನವನ
ದೈವ ನನಗೆ ಕೊಡಲಿಲ್ಲ. ಕೊಡಲಿಲ್ಲ ಎಂದು ನನಗೆ ಕೊರೆ ಇಲ್ಲ, ಚರಿತೆ ಹೇಗೆ ಅಲ್ಲವೋ ಹಾ
ಇದು ಒಬ್ಬ ಸಾಧುವಿನ ತಪ್ಪೊಪ್ಪಿಗೆಯ ಚಿನ್ಹವೂ ಅಲ್ಲ. ನಾನು ತಪ್ಪುಗಳನ್ನು ಮಾಡಿದ್ದೇ
ಅದನ್ನು ನನ್ನ ದೈವದೆದುರಿಗೆ ಒಪ್ಪಿಕೊಳ್ಳುತ್ತೇನೆ. ಸಾಧುವಾಗಿದ್ದರೆ ತಪ್ಪುಗಳನ್ನು ದಾಟಿ ಸಾ
ವಾದೆ ಎಂದು ಹೇಳಿಕೊಳ್ಳಬಹುದಾಗಿತ್ತು. ದಿನದ ಬಾಳುವ ನಡೆಸುತ್ತ ಈಗಲೂ ತಪ್ಪುಮಾ
ತ್ತಿರುವ ನಾನು ತಪ್ಪನ್ನು ಒಪ್ಪಿ ಮುಗಿಸಲಿ ಹೇಗೆ ? ದಾಸರು ಹೇಳಿದಂತೆ, ನನ್ನ ತಪ್ಪು ಅನ
ಕೋಟಿ, ದೈವದ ಸೈರಣೆಗೆ ಮಿತಿ ಇಲ್ಲ. ನನ್ನ ಬಾಳುವೆಯನ್ನು ಕುರಿತ ನನ್ನ ಭಾವ ದಿನ ಕಳೆದ
ಬೆಳೆದು ಬೆಳೆದು ಬಂದಿದೆ........"

ಮಾಸ್ತಿ ವೆಂಕಟೇಶ ಅಯ್ಯಂಗಾ

(ಭಾ

# ಮಾಸ್ತಿ : ಇತ್ತ ವಾಲ್ಮೀಕಿ-ಅತ್ತ ಶೇಕ್ಸ್‌ಪಿಯರ್

ಕೆ. ನರಸಿಂಹಮೂರ್ತಿ

1983ರ ಭಾರತೀಯ ಜ್ಞಾನಪೀಠ ಪ್ರಶಸ್ತಿ ಡಾ॥ ಮಾಸ್ತಿ ವೆಂಕಟೇಶ ಅಯ್ಯಂಗಾರರಿಗೆ ಬಂದುದು ಕನ್ನಡಿಗರಿಗೆ ಸಂತಸದ, ತೃಪ್ತಿಯ ಮತ್ತು ಹೆಮ್ಮೆಯ ವಿಷಯ. ಇವರೂ ಸೇರಿದಂತೆ ಕನ್ನಡದಲ್ಲಿ ಈ ಪ್ರಶಸ್ತಿಯನ್ನು ಪಡೆದವರು ನಾಲ್ವರು. ಹಿಂದಿಯ ಜೊತೆಗೆ ಭಾರತೀಯ ಭಾಷೆಗಳಲ್ಲಿ ಕನ್ನಡವೊಂದೇ ಈ ಗೌರವಕ್ಕೆ ಪಾತ್ರವಾಗಿರುವುದು ಅಭಿಮಾನದ ಸಂಗತಿ.

ಡಾ॥ ಮಾಸ್ತಿ ಇಂದಿನ ನಮ್ಮ ಸಾಹಿತ್ಯಲೋಕದ ವೃದ್ಧಪಿತಾಮಹರು. ಆದರೆ ಎಪ್ಪತ್ತೈದು ವರ್ಷಗಳಿಂದ ಅವಿರತವಾಗಿ ಸಾಹಿತ್ಯ ರಚನೆ ಮಾಡುತ್ತಿರುವ ಈ ರಸಋಷಿಗಳು ಇಂದಿಗೂ ಸಾಹಿತ್ಯಕ್ಷೇತ್ರದಲ್ಲಿ ಕ್ರಿಯಾಶೀಲರು. ಮೊದಲಿನಿಂದ ಅವರು ಜನಪ್ರಿಯರಾಗಿ ಪ್ರಸಿದ್ಧರಾದುದು ಅವರ ಕಾವ್ಯನಾಮವಾದ 'ಶ್ರೀನಿವಾಸ' ರಾಗಿ. ಇಂದು ಅವರು ನಮ್ಮೆಲ್ಲರ ವಿಶ್ವಾಸಗೌರವಗಳಿಗೆ ಪಾತ್ರರಾದ ಹಿರಿಯ 'ಅಣ್ಣ ಮಾಸ್ತಿ'

ಮಾಸ್ತಿಯವರ ಸಾಹಿತ್ಯ ಬಹುಮುಖಿ, ವಿಪುಲ. ಸಾಹಿತ್ಯದ ಎಲ್ಲಾ ಪ್ರಕಾರಗಳಲ್ಲಿಯೂ ಅವರು ಉತ್ತಮ ಕೊಡುಗೆಗಳನ್ನು ನೀಡಿದ್ದಾರೆ. ಕಾವ್ಯ, ನಾಟಕ, ಸಣ್ಣಕತೆ, ಕಾದಂಬರಿ, ಇಂಥ ಸೃಜನಸಾಹಿತ್ಯ ಪ್ರಕಾರಗಳಲ್ಲಿಯೂ, ವಿಮರ್ಶೆ, ಚಿಂತನ, ಜೀವನಚರಿತ್ರೆ ಆತ್ಮಕತೆ, ಪತ್ರಿಕಾ ಸಂಪಾದಕೀಯ ಇಂಥ ಸೃಜನೇತರ ಸಾಹಿತ್ಯಪ್ರಕಾರಗಳಲ್ಲಿಯೂ ಅವರು ಪ್ರತಿಭೆ, ಅವರ ಜ್ಞಾನ, ಪ್ರಕಟವಾಗಿವೆ.

## ಬೆರಗುಗೊಳಿಸುವ ವೈವಿಧ್ಯ

ಅವರನ್ನು ಕನ್ನಡ ಸಣ್ಣಕತೆಯ ಜನಕರೆಂದು ಕರೆಯುವುದಕ್ಕೆ ಕಾರಣ. ನಮ್ಮಲ್ಲಿ ಸಣ್ಣಕತೆಗೆ ನಿರ್ದಿಷ್ಟ ಸ್ವರೂಪವನ್ನು ಕೊಟ್ಟು ಜೀವನ ದರ್ಶನದ ಚಿತ್ರಣಕ್ಕೆ ಒಂದು ಕಲಾಮಾಧ್ಯಮವಾಗಿ ಅದನ್ನು ಬಳಸಿ ರೂಢಿಸಿದವರಲ್ಲಿ ಅವರು ಮೊದಲಿಗರು ಎಂಬುದು. ಆದ್ಯರು ಹೇಗೋ ಹಾಗೇ ಇಂದಿಗೂ ಅವರು ನಮ್ಮ ಅತ್ಯುತ್ತಮ ಸಣ್ಣಕತೆಗಾರರು. ಅವರು ಕೊಟ್ಟಿರುವಷ್ಟು ಹೆಚ್ಚು ಸಂಖ್ಯೆಯ ಉತ್ತಮ ಕತೆಗಳನ್ನು ಇನ್ನು ಯಾರೂ ಕೊಟ್ಟಿಲ್ಲ. ಅಲ್ಲದೆ ಅವರ ಜೀವನ ದರ್ಶನವನ್ನು ಪ್ರತಿಬಿಂಬಿಸುವ ಒಂದು ಪ್ರಪಂಚವನ್ನೇ ತಮ್ಮ ಕತೆಗಳಿಂದ ಅವರು ಕಟ್ಟಿಕೊಟ್ಟಿರುವಂತೆ ಇನ್ನಾರೂ ಕಟ್ಟಿಕೊಟ್ಟಿಲ್ಲ. ಈ ಪ್ರಪಂಚದ ವಸ್ತು ಪಾತ್ರ ವೈವಿಧ್ಯ

ಬೆರಗುಗೊಳಿಸುವಂತಹದು. ಉದಾಹರಣೆಗೆ ಈ ಕತೆಗಳನ್ನು ನೋಡಬಹುದು: 'ಬೀದಿಯಲ್ಲಿ ಹೋಗುವ ನಾರಿ,' 'ಒಂದು ಹಳೆಯ ಕತೆ,' 'ಮೊಸರಿನ ಮಂಗಮ್ಮ,' 'ನಿಜಗಲ್ಲಿನ ರಾಣಿ,' 'ಹೇಮಕೂಟದಿಂದ ಬಂದಮೇಲೆ,' 'ಕೃಷ್ಣಮೂರ್ತಿಯ ಹೆಂಡತಿ,' 'ವೆಂಕಟಶಾಮಿಯ ಪ್ರಣಯ,' 'ಮಸುಮತ್ತಿ,' 'ವಿಚಿತ್ರ ಪ್ರೇಮ,' 'ಇರುವೆಗಳ ಲೋಕ,' 'ಕವಿಯ ಬಾಳಿನ ಕೊನೆಯ ದಿನ,' 'ಮಹರ್ಷಿ ಟಾಲ್ ಸ್ಟಾಯ್ ಮತ್ತು ಭೂರ್ಜ ವೃಕ್ಷಗಳು,' ಹಲವು ಕತೆಗಳಲಿ ಮಾಸ್ತಿಯವರು ನಿರೂಪಕನೊಬ್ಬ ಕತೆ ಹೇಳುವ ಸಂಪ್ರದಾಯವನ್ನು ಜಾಣ್ಮೆಯಿಂದ ಬಳಸಿಕೊಂಡು ತಮ್ಮ ಜೀವನ ಚಿತ್ರಕ್ಕೆ ಇನ್ನೊಂದು ದೃಷ್ಟಿಯನ್ನು ಒದಗಿಸಿಕೊಳ್ಳುತ್ತಾರೆ. ವಸ್ತುನಿಷ್ಠವಾಗಿ ಬರೆವ ಕತೆಗಳಲ್ಲಿಯೂ ಬೇರೆ ಬೇರೆ ದೃಷ್ಟಿಕೋನಗಳಿಂದ ಜೀವನದ ಮೇಲೆ ಬೆಳಕು ಚೆಲ್ಲುತ್ತಾರೆ, ಮೇಲೆ ನೋಡಿದರೆ ಸರಳ. ಅಷ್ಟೇ ಸಂಕೀರ್ಣ, ಅವರ ಕಥನ ಶೈಲಿ, ಅವರ ಜೀವನ ಚಿತ್ರಣ.

'ಬಿನ್ನಹ'ದಿಂದ ಆರಂಭವಾದ ಅವರ ಕವನ ಸಂಗ್ರಹದಲ್ಲಿನ ಹಲವು ಗೀತೆಗಳೂ ಕವಿತೆಗಳೂ ಕನ್ನಡನಾಡು ಮತ್ತು ಕನ್ನಡ ಸಾಹಿತ್ಯಗಳನ್ನು ಕುರಿತು ಮತ್ತು ಜೀವನ ದರ್ಶನವನ್ನು ಅಭಿವ್ಯಕ್ತಿಸುವ ಸುನೀತಗಳೂ ಆಕರ್ಷಕ. ಆದರೆ ಕಾವ್ಯ ಕ್ಷೇತ್ರದಲ್ಲಿ ಅವರ ಅನನ್ಯ ಕೊಡಿಗೆಗಳು ಅವರ ಕಥನ ಕವನಗಳು ಮತ್ತು ಅವುಗಳಿಗಾಗಿ ಅವರು ಸೃಷ್ಟಿಸಿಕೊಂಡು ಸರಳ ರಗಳೆಯ ಛಂದೋರೂಪ. 'ರಾಮನವಮಿ'ಯಂತಹ ಸುಂದರ ಕಥನ ಕವನಗಳೂ 'ಶ್ರೀ ರಾಮ ಪಟ್ಟಾಭಿಷೇಕ'ದಂತಹ ಒಂದು ಮಹಾ ಕಾವ್ಯವೂ ಅಪೂರ್ವ ಕೃತಿಗಳು. ಅವರ ಕಾವ್ಯಶೈಲಿ ಅತ್ಯಂತ ಸಹಜ, ಸರಳ, ಸುಲಭಗ್ರಾಹ್ಯ. ಅಷ್ಟೇ ಸೂಕ್ಷ್ಮ, ಮನೋಜ್ಞ.

ಅವರ 'ಯಶೋಧರಾ' ಕನ್ನಡದ ಕೆಲವೇ ಅತ್ಯುತ್ತಮ ಕಾವ್ಯನಾಟಕಗಳಲ್ಲೊಂದು. ಬುದ್ಧನ ಸಮಗ್ರಜೀವನದರ್ಶನದ ಗಾಂಭೀರ್ಯದಿಂದ ಕೂಡಿದ ವ್ಯಕ್ತಿತ್ವ ಮತ್ತು ತ್ಯಕ್ತಳೆಂದು ಕ್ಷುಬ್ಧಳಾಗಿದ್ದು ಕಡೆಯಲ್ಲಿ ಜೀವನದಲ್ಲಿ ತನ್ನ ವಿಶಿಷ್ಟ ಸ್ಥಾನವನ್ನು ಕಂಡುಕೊಂಡು ಶಾಂತಳಾದ ಯಶೋಧರೆಯ ವ್ಯಕ್ತಿತ್ವ - ಇವುಗಳ ಚಿತ್ರಣ ಮತ್ತು ಕಾವ್ಯಮಯ ಶೈಲಿ ಈ ನಾಟಕದ ವೈಶಿಷ್ಟ್ಯ. ಇದು ಒಂದು ಧ್ರುವವಾದರೆ, ಇನ್ನೊಂದು ಧ್ರುವ ಅವರ 'ಕಾಕನ ಕೋಟೆ,' ಅಸಾಧಾರಣ ರಂಗ ಪ್ರಜ್ಞೆಯ ಈ ನಾಟಕ ತನ್ನ ಜಾನಪದ ವಸ್ತು ತಂತ್ರ ಭಾಷೆಯಿಂದ ಹೃದಯಂಗಮ. ಮಾಸತಿ ಇನ್ನೊಂದು ಯಶಸ್ವೀ ಕೃತಿ, ಹೆಸರಿಸಬೇಕಾದ ಇತರ ನಾಟಕಗಳು 'ತಾಳಿಕೋಟೆ,' 'ಶಿವ ಛತ್ರಪತಿ.'

### ಹೊಸ ಆಯಾಮ

ಅವರ 'ಆದಿಕವಿ ವಾಲ್ಮೀಕಿ'ಯಷ್ಟು ಸೊಗಸಾದ ರಾಮಾಯಣವನ್ನು ಕುರಿತು ವಿಮರ್ಶಾ ಗ್ರಂಥಗಳು ಯಾವ ಭಾಷೆಯಲ್ಲಾದರೂ ವಿರಳ. ವೈಷ್ಣವ ದಾಸರ

ಕೀರ್ತನೆಗಳು ತಮಿಳು ವೈಷ್ಣವ ಪ್ರಬಂಧಗಳು ಗೀತಾಂಜಲಿ ಲಾವಣಿ ಸಾಂಗತ್ಯಗಳು- ಈ ವಿಷಯವಾಗಿ ಅವರು ಬರೆದು ವಿಮರ್ಶಾ ಪ್ರಬಂಧಗಳು ಈ ಕೃತಿಗಳ ಮೇಲೆ ಹೇಗೋ ಹಾಗೆ ಮಾಸ್ತಿಯವರ ಗೀತೆಗಳ ಮೇಲೆಯೂ ಬೆಳಕು ಚೆಲ್ಲುತ್ತವೆ. ಅವರ ಪ್ರಿಯ ಲೇಖಕ ಮಾಥ್ಯೂ ಆರ್ನಾಲ್ಡ್‌ನಂತೆ ಬೇರೆ ರಾಷ್ಟ್ರಗಳ. ಬೇರೆ ಭಾಷೆಗಳ ಉದಾತ್ತ ಲೇಖಕರ ಬಗ್ಗೆಯೂ ಮಾಸ್ತಿಯವರು ಪರಿಚಯಾತ್ಮಕ ವಿಮರ್ಶಾ ಲೇಖನಗಳನ್ನು ರಚಿಸಿ ನಮ್ಮ ಸಂಸ್ಕೃತಿಗೆ ಹೊಸ ಆಯಾಮಗಳನ್ನು ಒದಗಿಸಿದ್ದಾರೆ.

'ಸುಬ್ಬಣ'ನಂತಹ ಹೃದಯ ಸ್ಪರ್ಶಿಯಾದ ನೀಳ್ಗತೆಯನ್ನು, ಶೇಷಮ್ಮ ಎಂಬ ಕಿರು ಕಾದಂಬರಿಯನ್ನೂ ಕೊಟ್ಟಿರುವ ಮಾಸ್ತಿಯವರು ತಮ್ಮ ಕಾದಂಬರಿಗಳ ವಿಸ್ತಾರಕ್ಕೆ ಐತಿಹಾಸಿಕ ಪ್ರತಿಕ್ರಿಯಂತಹ ಮಹತ್ವದ ವಸ್ತುವನ್ನು ಆಯ್ದುಕೊಂಡಿದ್ದಾರೆ. 'ಚೆನ್ನ ಬಸವ ನಾಯಕ' ಪೂರ್ವಭಾವಿ ಪ್ರಯೋಗವೆನಿಸಿದರೂ ರಾಣಿ ವೀರಮ್ಮಾಜಿ ಮತ್ತು ನೇಮಯ್ಯರ ಅವರಿಬ್ಬರಿಗಿಂತಲೂ ಹೆಚ್ಚಾಗಿ ಹೃದಯದ ಸ್ವಭಾವ ಚಿತ್ರಣದ ಯಶಸ್ಸಿನಿಂದ ಗಣ್ಯಕೃತಿಯಾಗುತ್ತದೆ. ಆದರೆ ಮಾಸ್ತಿಯವರ ಐತಿಹಾಸಿಕ ಕಲ್ಪನಾಶಕ್ತಿಯ ಪೂರ್ಣ ಫಲ 'ಚಿಕವೀರ ರಾಜೇಂದ್ರ,' ಆಳುವವರ ಅಶಿಸ್ತು ಅನೈತಿಕತೆಯಿಂದ ಆಳ್ವಿಕೆ ಶಿಥಿಲವಾಗಿ ಒಂದು ರಾಜವಂಶ, ಒಂದು ನಾಡು, ಅನಿವಾರ್ಯವಾಗಿ ಅಧೋಗತಿಗೆ ಜಾರಿ ಬೀಳುವ ಐತಿಹಾಸಿಕ ಪ್ರಕಿಯಯ ಸಾರ್ವತಿಕ ಸಾರ್ವಕಾಲಿಕ ದುರಂತ ಸತ್ಯದ ಚಿತ್ರ ಈ ಅಪೂರ್ವ ಕೃತಿಯಲ್ಲಿ ಚಿರಸ್ಮರಣೀಯವಾಗಿ ಚಿತ್ರಿತವಾಗಿದೆ. ಇಲ್ಲಿ ನಾವು ಕಾಣುವುದು ಐತಿಹಾಸಿಕ ರೋಮಾಂಚಕ ಘಟನೆಗಳನ್ನು ಮಾತ್ರವಲ್ಲ; ವಿಶ್ಲೇಷಣಾತ್ಮಕ ಐತಿಹಾಸಿಕ ಪ್ರತಿಕ್ರಿಯೆಯ ವಾಸ್ತವಿಕ ಚಿತ್ರಣ. ಇಲ್ಲಿನ ಬಂಧು ಏನು ಬಿಗಿ! ದೊರೆಯ ತಂಗಿ ಗರ್ಭಿಣಿ, ದೊರೆಯ ಸೆರೆಯಲ್ಲಿ - ಇದು ಕಾದಂಬರಿಯ ಆರಂಭ. ಹುಟ್ಟಿದ ಮಗುವನ್ನು ಕರೆದುಕೊಂಡು ಈ ತಂಗಿ ಭಾವಂದಿರು ದೊರೆಯ ಕಣ್ಣು ತಪ್ಪಿಸಿ ಕೊಡಗಿನಿಂದ ಪರಾರಿಯಾಗುವ ಮತ್ತು ದಾರಿಯಲ್ಲಿ ಮಗುವನ್ನು ಕಳೆದುಕೊಳ್ಳುವ ಕೂತೂಹಲ ಕೆರಳಿಸುವ ನಿರೂಪಣೆಯ ಕಡೆಯಲ್ಲಿ ಮಗು ದೊರೆಯ ವಶವಾಗಿ ದೊರೆಯಿಂದ ದುರ್ಮರಣಕ್ಕೆ ತುತ್ತಾಗುತ್ತದೆ – ಇದು ಕ್ಲೈಯ್‌ಮ್ಯಾಕ್ಸ್ ಇದರ ಫಲಿತಾಂಶ ಒಂದೆಡೆ ಜನತೆಯ ರೋಷ, ಇನ್ನೊಂದೆಡೆ ಕಂಪನಿಯವರ ಅಸಾಧಾರಣ ಮುತ್ಸದ್ದಿತನ ಇವುಗಳಿಂದ ದೊರೆಯ ಸೋಲು, ಸೆರೆ, ಗಡೀಪಾರು - ಇದು ಕಾದಂಬರಿಯ, ಅಂತ್ಯ. ಎಂಥ ಮರ್ಮಸ್ಪರ್ಶಿ ಪಾತ್ರ ಚಿತ್ರಣ! ದೌರ್ಬಲ್ಯ ದುಷ್ಟತನವಾಗಿ ನಿರಂಕುಶತೆ ಕಾರ್ಯಗಳ ಸಾಕಾರಮೂರ್ತಿಯಾಗಿ ಚಿಕವೀರ ರಾಜೇಂದ್ರ ತನ್ನ ಪಾಪಫಲವನ್ನು ಕಾಣುತ್ತಾನೆ. ಆವನ ದುಶ್ಚಟ ದುಷ್ಟತನಗಳಲ್ಲಿ ಭಾಗಿಯಾದರೂ ಅವನಲ್ಲಿ ನಿಷ್ಠೆಯಿಂದ ನಡೆದುಕೊಂಡು ಅವನಿಂದಲೇ ಗುಂಡಿಕ್ಕಿ ಕೊಲ್ಲಲ್ಪಡುವ ದುರದೃಷ್ಟದ ಕುಂಟ ಬಸವ ಅವನಂತೆಯೇ ಒಬ್ಬ ದುರಂತಪಾತ್ರ. ಸ್ವಾಮಿನಿಷ್ಠೆಯಿಂದ ಕ್ರಮೇಣ ಕ್ರಾಂತಿಯ ಕಡೆಗೆ ಸರಿಯುವ ಮಂತ್ರಿ ಬೋಪಣ್ಣ ಮತ್ತು ಪತಿಯನ್ನು ನಿಷ್ಠೆಯಿಂದ ಕೊನೆಯುವರೆಗೂ

ಸೇವಿಸುವ ಸಾಧ್ವಿ ರಾಣಿ ಗೌರಮ್ಮಾಜಿ - ಅವರ ಪಾತ್ರ ಚಿತ್ರಣದ ಸೂಕ್ಷ್ಮತೆ ಸ್ಮರಣೀಯ. 'ಚಿಕವೀರ ರಾಜೇಂದ್ರ'ದ ಇತರ ಸ್ವಾರಸ್ಯಗಳು ಅದರ ಪ್ರಾದೇಶಿಕ ಸೊಗಡಿನ ವೈಶಿಷ್ಟ್ಯಪೂರ್ಣ ಸಂಭಾಷಣೆಗಳು, ಕಂಪೆನಿಯವರ ಮುತ್ಸದ್ದಿತನ ಪ್ರಕಟವಾಗುವ ಅವರ ಪತ್ರ ವ್ಯವಹಾರಗಳು ಮತ್ತು ನಡಾವಳಿ, 'ಕಾವೇರಿ ಮಕ್ಕಳು' ಆಡುವ ಕಟಕಿ ನಾಟಕ ಇತ್ಯಾದಿ. ಈ ಕನ್ನಡದ ಅತ್ಯುತ್ತಮ ಐತಿಹಾಸಿಕ ಕಾದಂಬರಿ, ಬೇರೆ ಭಾಷೆಗಳ ಉನ್ನತ ಶ್ರೇಣಿಯ ಐತಿಹಾಸಿಕ ಕಾದಂಬರಿಗಳೊಡನೆ ನಿಲ್ಲಬಹುದಾದ ಅಪೂರ್ವ ಕೃತಿ. ತಡವಾಗಿಯಾದರೂ ಭಾರತೀಯ ಜ್ಞಾನಪೀಠವು ಈ ಮಹತ್ಕೃತಿಯನ್ನು ಗುರುತಿಸಿ ಗೌರವಿಸಿರುವುದು ಅತ್ಯಂತ ಉಚಿತ.

ಮಾಸ್ತಿಯವರ ಆತ್ಮಕತೆ 'ಭಾವ'ವನ್ನು ಓದಿದವರು, ಅವರನ್ನು ಬಲ್ಲವರು ಅವರ ಆಕರ್ಷಕ ವ್ಯಕ್ತಿತ್ವಕ್ಕೆ ಮಾರು ಹೋಗಿದ್ದಾರೆ. ಅವರ ಮಾನವೀಯತೆ, ಇತ್ಯಾತ್ಮಕ ಧೋರಣೆ, ಹಸನ್ಮುಖ, ಸ್ನೇಹಪರ ಸಂಭಾಷಣೆ, ಕುಂದದ ಲವಲವಿಕೆ, ವಿಶಾಲವಾದ ಅನುಭವ, ಆಳವಾದ ಜ್ಞಾನ. ವಿವೇಕ. ಸುಸಂಸ್ಕೃತಿ ಇವುಗಳನ್ನು ಕಂಡು ಮುಗ್ಧರಾಗದವರಾರು ? ಅವರ ವಿಪುಲ ವಾಙ್ಮಯ ವೊಳಗಿ ಬೆಳಗುವುದು ಅವರ ಈ ವ್ಯಕ್ತಿತ್ವದ ಶಾಂತ ತೇಜಸ್ಸಿನ ಪ್ರತಿಫಲನದಿಂದ.

ಜ್ಞಾನಪೀಠ ಪ್ರಶಸ್ತಿ ಬಂದ ಸಂದರ್ಭದಲ್ಲಿ ಮಾಸ್ತಿಯವರ ಜೊತೆ ನಡೆಸಿದ ಸಂದರ್ಶನದಿಂದ ಆಯ್ದ ಭಾಗಗಳು :

ಕೆ.ಎನ್. : ಈಚೆಗೆ ಪ್ರಕಟವಾದ ತಮ್ಮ ಕಥಾ ಸಂಕಲನಕ್ಕೆ ಮುನ್ನುಡಿ ಬರೆಯುತ್ತಾ ತಾವು ತಮ್ಮ ಸಾಹಿತ್ಯ ರಚನೆಯ ಮುಖ್ಯೋದ್ದೇಶ ಜೀವನ ತಮಗೆ ನೀಡಿರುವ ದರ್ಶನವನ್ನು ವಿವರಿಸುವ ಚಿತ್ರಗಳನ್ನು ಕೊಡುವುದೆಂದು ಹೇಳಿದ್ದೀರಿ. ತಮ್ಮ ವಿಷಯವಾಗಿ ಭಾಷಣ ಮಾಡುತ್ತಾ ಆಚಾರ್ಯ ಬಿ.ಎಂ.ಶ್ರೀ ಅವರು ಒಮ್ಮೆ ಹೇಳಿದ್ದಾರೆ : "ತಮ್ಮ ಕವಿತೆಯಲ್ಲಿ ನಾವು ನಮ್ಮ ನಾಡಿನ ಸಂಸ್ಕೃತಿ, ನಮ್ಮ ನಾಡಿನ ಜೀವನ ಮಾಧುರ್ಯವನ್ನೂ, ಬೆಳಕನ್ನೂ (ಸ್ವೀಟ್‌ನೆಸ್ ಅಂಡ್ ಲೈಟ್) ಕಾಣುತ್ತೇವೆ" ಎಂದು. ತಮ್ಮ ದರ್ಶನವನ್ನು ಮಾನವತಾವಾದವನ್ನೂ ಒಳಗೊಳ್ಳುವಂತಹ ವಿಶಾಲಾರ್ಥದ ಭಾರತೀಯ ಸಂಸ್ಕೃತಿ, ತಮ್ಮ ದರ್ಶನ ಎಂದು ನಿದರ್ಶಿಸಬಹುದಲ್ಲವೆ ? ತಮ್ಮ ಜೀವನ ದರ್ಶನವನ್ನು ತಾವು ರೂಪಿಸಿಕೊಳ್ಳಲು ನೆರವಾದ ಪ್ರಭಾವಗಳಾವುವು ?

ಮಾಸ್ತಿ : ಗೊತ್ತಾಗೋದಿಲ್ಲ. ಅದು ಯಾವುದು ಅಂತ ಬಿಡಿಸಿ ಹೇಳೋದಕ್ಕೆ ಆಗೋಲ್ಲ. ನನಗೆ, ಮುಖ್ಯವಾಗಿ ನನ್ನ ಸಾಹಿತ್ಯಕ್ಕೆ ಮುಖ ಕೊಟ್ಟಿದ್ದು ಚಿಕ್ಕಂದಿನಲ್ಲಿ ನಾನು ಓದಿದ ರಾಮಾಯಣ, ಭಾರತ, ಕಾಳಿದಾಸ, ಕುಮಾರವ್ಯಾಸ, ರತ್ನಾಕರವರ್ಣಿ, ಬಸವಣ್ಣ, ಬಿಂಡಿಗನವಿಲೆ ವೆಂಕಟಾಚಾರ್, ಚ. ವಾಸುದೇವಯ್ಯ ವಾಸುದೇವಯ್ಯನವರು. ನನ್ನ

ಭಾಷೆ ಮತ್ತು ಆಲೋಚನೆಯನ್ನು ರೂಪಿಸಿದರು. ನಾನು ಫೊ ರ್ತ್ ಫಾರಂನಲ್ಲಿರುವಾಗಲೇ ಲ್ಯಾಂಬ್‌ನ 'ಟೇಲ್ಸ್ ಫ್ರಂ ಷೇಕ್ಸ್‌ಪಿಯರ್' ನಮಗಿತ್ತು. ನಮ್ಮ ಮೇಷ್ಟ್ರು ಮೂಲ ನಾಟಕಗಳನ್ನೇ ತಂದು ಓದಿ ಹೇಳಿದರು. ಹೀಗೆ ಷೇಕ್ಸ್‌ಪಿಯರ್ ನಾಟಕಗಳು ಆಗಲೇ ನನ್ನ ಕೈಗ ಬಂದವು. ಅಂದ್ರೆ ಕೆಳಗಿನ ತರಗತಿಯಲ್ಲಿ ಓದುತ್ತಿರುವಾಗಲೇ ನಾನು ಮಹಾನ್ ಸಾಹಿತ್ಯದಲ್ಲಿ ಮುಳುಗು ಹಾಕಿದ್ದೆ. ಅಂಥ ಸಾಹಿತ್ಯದ ರುಚಿ ಮುಟ್ಟಿದ ಮೇಲೆ ಅದಕ್ಕೆ ಕಡಿಮೇದು ಏನು ಬೇಡ ಅನಿಸುತ್ತದೆ.

ಕೆ.ಎನ್. : ವಾಲ್ಮೀಕಿಯ ಸಹಾನುಭೂತಿಯೇ ಸಾಹಿತ್ಯಕ್ಕೆ ಸ್ಫೂರ್ತಿಯಾಗುವ ಸಂಪ್ರದಾಯ ನಿಮ್ಮಲ್ಲಿ ಮುಂದುವರೆದಿದೆ ಅಲ್ಲವೆ ?

ಮಾಸ್ತಿ : ಹಾಗಾಗಿದೆ. ಯಾವ ಮನುಷ್ಯನನ್ನೂ ನಾನು ಅವನು ಕೆಟ್ಟವನು ಅಂತ ದ್ವೇಷಿಸಲಾರೆ. ಮಾಸ್ತಿಯವರು ದುಷ್ಟರನ್ನು ಚಿತ್ರಿಸುವುದೇ ಇಲ್ಲ ಅನ್ನೋ ಮಾತಿದೆ....

ಕೆ.ಎನ್. : ಏ ಚಿಕವೀರ ರಾಜೇಂದ್ರ....

ಮಾಸ್ತಿ : ಅವನಿಗಿಂತ ದುಷ್ಟರು ಯಾರು ? ಆದರೆ ಅವನ ಬಗ್ಗೆ ನನಗೆ ಕೋಪ ಇಲ್ಲ.

ಕೆ.ಎನ್. : ಸಾಹಿತ್ಯದ ಎಲ್ಲಾ ಕ್ಷೇತ್ರಗಳಲ್ಲಿಯೂ ಉತ್ತಮ ಕೊಡುಗೆಗಳನ್ನು ಕೊಡುತ್ತಾ ಬಂದಿದ್ದೀರಿ. ವಸ್ತುವಿಗೆ ತಕ್ಕಂತೆಯೂ ಪ್ರಕಾರ ಆಯ್ಕೆ ಯಾಗುತ್ತದೆ. ಅಲ್ಲದೆ ಒಂದು ಸಾಹಿತ್ಯ ಪ್ರಕಾರದಲ್ಲಿ ಉಳಿದ ಕೆಲವು ಪ್ರಕಾರಗಳ ಅಂಶಗಳು ಸೇರ್ಪಡೆಯಾಗಿರುತ್ತವೆ. ಹೀಗಿದ್ದೂ ಯಾವ ಸಾಹಿತ್ಯ ಪ್ರಕಾರ ತಮಗೆ ಹೆಚ್ಚು ಪ್ರಿಯ, ತಮ್ಮ ಹಲವಾರು ಉತ್ತಮ ಕೃತಿಗಳಲ್ಲಿ ಯಾವುದು ತಮಗೆ ಅತ್ಯಂತ ಪ್ರಿಯ ಎಂದು ಕೇಳ ಒಹುದೆ?

ಮಾಸ್ತಿ : ಸಾಧ್ಯ ಇಲ್ಲ, ನಂಗೆ ಹೇಳೋದಿಕ್ಕೆ ಒಂದು ಕತೆ ಹೇಳ್ತೀನಿ. ಅಕ್ಕ ತಂಗಿ ಇದ್ರಂತೆ ತಂಗಿಗೆ ಮಕ್ಕಳಿಲ್ಲ ಅಕ್ಕನಿಗೆ 12 ತಂಗಿ ಅಕ್ಕನನ್ನು ಕೇಳಿದ್ಲಂತೆ ನಿನ್ನ ಒಂದು ಮಗು ಕೊಡೆ ನಾನು ದತ್ತು ತಗೋತೀನಿ ಅಂತ. ಅಕ್ಕ ತಗೊಂಚು ಹೋಗು ಅಂದಳು. ಗಂಡನಿಗೆ ಹೇಳಿದಳು ಹೀಗೆ ಹೇಳಿದೆ ಅಂತ, ಯಾರನ್ನ ಕಳುಹಿಸಲಿ ಅಂತ ರಾತ್ರಿ ನೋಡಿದರಂತೆ 12 ಮಕ್ಕಳು ಮಲಗಿದಾರೆ. ಯಾರನ್ನೂ ಕೊಡೋ ಹಾಗಿಲ್ಲ ನನಗೆ ಯಾರನ್ನೂ ಕೊಡಲು ಮನಸ್ಸಿಲ್ಲ ನನ್ನ ಯಜಮಾನರ ಭಾವನೇನೊ ಹಾಗೆ ಇದೆ ಅಂತ ತಂಗಿಗೆ ಹೇಳಿದಳಂತೆ. ಹಾಗೆ ನನಗೂ ಅಲ್ವ.

ಕೆ.ಎನ್. : ಸಣ್ಣ ಕತೆ ತಮಗೇ ಹೆಚ್ಚು....

ಮಾಸ್ತಿ : ಇಲ್ಲ. (ಇಲ್ಲವೆ ಇಲ್ಲ) ಯಾಕೆ, ಈ ಸಂಪಾದಕನ ಟೀಕೆ ಬರೆದೀನಲ್ಲ.

ಅದು ಕೂಡ ನನ್ನ ಮನಸ್ಸಿಗೆ ಕಾವ್ಯ. ಯಾಕೆಂದ್ರೆ ಅದರಲ್ಲಿ ನನ್ನ ಭಾವಸ್ಪಂದನ ಇದೆ.

ಕೆ.ಎಸ್. : ತಾವು ಸಾಹಿತ್ಯ ರಚನೆಯನ್ನು ಆರಂಭಿಸಿದ ಕಾಲದಿಂದಲೇ ವಸ್ತು, ನಿರೂಪಣಾ ತಂತ್ರ ಎರಡರಲ್ಲಿಯೂ ವಾಸ್ತವಿಕತೆಯನ್ನು ಬಳಕೆಗೆ ತಂದಿರಿ. ನಿಮ್ಮ ವಸ್ತು ಹೇಗೆ ಹತ್ತಿರದ ಜೀವನಾನುಭವವೋ ಹಾಗೆಯೇ ನಿರೂಪಣಾ ತಂತ್ರವೂ ನಮ್ಮ ಓರಲ್ ಟ್ರೆಡಿಷನ್ನಿಗೆ ಸಮೀಪವಾದುದು. ಇಂಥ ವಾಸ್ತವಿಕತೆ ಆ ಸಂದರ್ಭದಲ್ಲಿ ಕ್ರಾಂತಿಕಾರಿ, ತಾವು ವಾಸ್ತವಿಕವಾಗಿ ಬರೆಯತೊಡಗಿದುದರ ಹಿಂದಿನ ಉದ್ದೇಶ ಪ್ರೇರಣೆಗಳನ್ನು ತಿಳಿಸಬಹುದೆ ?

ಮಾಸ್ತಿ : ಏನೂ ಉದ್ದೇಶ ಇಲ್ಲ, ನನಗೆ ಬಂದ ದಾರೀನೆ ಅದು. ಇನ್ನಾವುದಾದರೂ ದಾರಿ ಇದ್ರೆ ಗೊತ್ತಿಲ ನನ್ನ ರಂಗಪ್ಪನ ಮದುವೆ ಕಥೇನೆ ತೆಗೆದುಕೊಳ್ಳಿ

ಕೆ.ಎಸ್. : ಹೌದು. ರಂಗನಾಥ ವಿವಾಹ ಅನ್ನದೆ ರಂಗನ ಮದುವೆ ಅಂತ ಕತೆಯಲ್ಲಿ ಮೊದಲೇ ಹೇಳಿದ್ದಿರಿ. ಈ ವಾಸ್ತವತೆಯ ಮಾರ್ಗ ಇದೆಯಲ್ಲ ಅದು ಬಂಕಿಮ ಚಂದ್ರರ ರೀತಿಗೆ ಬದಲು ಬರಬೇಕಾಗಿತ್ತು ಪುಟ್ಟಣ್ಣ ಅಂತಹವರಲ್ಲಿ ಸ್ವಲ್ಪಮಟ್ಟಿಗೆ ಬಂತು. ತಮ್ಮಲ್ಲಿ ನೇರವಾಗಿ ತಾನೇ ತಾನಾಗಿ ಬಂತು.

ತಮ್ಮ ವಿಮರ್ಶಾ ಲೇಖನಗಳಲ್ಲಿ ಸ್ವಲ್ಪ ಮಟ್ಟಿಗೆ ಮ್ಯಾಥ್ಯೂ ಅರ್ನಾಲ್ಡ್‌ನ ಪ್ರಭಾವ ಕಾಣುತ್ತದೆ. ತಮ್ಮ ಇಂಗ್ಲಿಷ್ ಅಧ್ಯಯನದ ಪ್ರಭಾವ ಹೆಚ್ಚಾಗಿ ತಮ್ಮ ಸೃಜನಶೀಲ ಸಾಹಿತ್ಯದಲ್ಲಿ ಕಾಣುವುದಿಲ್ಲ. ಈ ಸ್ವಾತಂತ್ರ್ಯವನ್ನು ಹೇಗೆ ಮೊದಲಿನಿಂದಲೂ ತಾವು ರೂಢಿಸಿಕೊಂಡಿರಿ?

ಮಾಸ್ತಿ : ನನ್ನ ಶಕ್ತಿ ನನಗೆ ಸಾಕಾಯಿತು. ನನ್ನ ಪ್ರೇರಣೆ ನನ್ನ ಸ್ವಂತದ್ದು. ಮಾಥ್ಯೂ ಅರ್ನಾಲ್ಡ್ ದಾರಿ ತೋರಿಸಿಕೊಟ್ಟರು. ಹೀಗೆ ಹೇಳು ಅಂತ ದಾರಿ ತೋರಿದರು. ತೇವ (ಟೆಂಡರ್‌ನೆಸ್) ಇರಲಿ ಮಾತಿನಲ್ಲಿ ಅಂತ.

ಕೆ.ಎಸ್. : ಆರ್ದ್ರತೆ ?

ಮಾಸ್ತಿ : ಮೂರು ಜನ ನನಗೆ ಹೇಳಿಕೊಟ್ಟರು. ಮ್ಯಾಥ್ಯೂ ಅರ್ನಾಲ್ಡ್, ಲೆಸ್ಲಿ ಸ್ಟಿವನ್ಸ್ ಮತ್ತು ಜಾನ್ ಮಾರ್ಲೆ. ಮಾರ್ಲೆಯಿಂದ ಬಹು ವಿಶಾಲವಾದ ವ್ಯಾಪ್ತಿಯುಳ್ಳ ಜೀವನ ದರ್ಶನ (ವಿಷನ್) ಸಿಗುತ್ತೆ ಮ್ಯಾಥ್ಯೂ ಅರ್ನಾಲ್ಡ್‌ನಿಂದ ಆರ್ದ್ರಭಾವ ಸಿಗುತ್ತೆ ಬಹಳ ದೊಡ್ಡವನು. ಸೊಗಸಾದ್ದನ್ನ ಹಿಡಿದು ಹೇಳೋನು, ಅದು ನನಗೆ ಪಾಠ ಆಯಿತು.

ಕೆ.ಎನ್. : ಆಮೇಲೆ ನೀವು ಶೇಕ್ಸ್‌ಪಿಯರ್‌ನ ಭಾಷಾಂತರ ಮಾಡಿದಿರಿ.

ಮಾಸ್ತಿ : ಶೇಕ್ಸ್‌ಪಿಯರ್‌ನ ನಾನು ಭಾಷಾಂತರ ಮಾಡುತ್ತಿದ್ದಾಗ ಆತ ಮುದ್ರಿತ ಪುಟದ ಹಿಂದೆ ಕನ್ನಡ ರೂಪದಲ್ಲಿ ಬಂದು ನಿಂತಂತೆ ನನಗೆ ಭಾಸ ವಾಗುತ್ತಿತ್ತು

## ಲೋಕಾನುಭವ

ಕೆ.ಎನ್. : ಆಡಳಿತದಲ್ಲಿ ತಾವು ಅಧಿಕಾರಿಯಾಗಿದ್ದ ಅನುಭವವೂ ತಮ್ಮ ಸಾಹಿತ್ಯ ಸೃಷ್ಟಿಗೆ ನೆರವಾಯಿತೆನ್ನಿಸುತ್ತದೆ. ಯಾವ ರೀತಿಯಲ್ಲಿ ?

ಮಾಸ್ತಿ : ನನ್ನ ಸಾಹಿತ್ಯದಲ್ಲಿ ಎಲ್ಲೆಲ್ಲಿ ಲೋಕ ವ್ಯವಹಾರ ಬಂದಿದೆಯೋ ಅಲ್ಲೆಲ್ಲಾ ಕೆಲಸಕ್ಕೆ ಬಂದಿದೆ. ಶಾನುಭೋಗ, ಪೋಲೀಸಿನವನು, ಮ್ಯಾಜಿಸ್ಟ್ರೇಟ್– ಹೀಗೆ ಎಲ್ಲ ಜನ ಬಂದಿದ್ದಾರೆ. ಅಷ್ಟೊಂದು ಜನ ನನ್ನ ಸಾಹಿತ್ಯದಲ್ಲಿ ಬರಬೇಕಾದ್ರೆ ನಾನು ಲೋಕ ನೋಡಿರಬೇಕಲ್ಲ ?

ಕೆ.ಎನ್. : ಹಾಗೆ ನೋಡಿದರೆ ಚಿಕವೀರ ರಾಜೇಂದ್ರ ಕಾದಂಬರಿಯ ಸಂಭಾಷಣೆಗಳು ಕೆಲವು ತುಂಬ ವಿಶಿಷ್ಟ ಅನ್ನಿಸುತ್ತವೆ. ಕೆಲವು ಶಬ್ದಗಳು ಬೇರೆ ಕಡೆ ಬಳಕೆಯಲ್ಲಿಲ್ಲ.

ಮಾಸ್ತಿ : ಅದರ ಬಗ್ಗೆ ನನಗೇ ಹೆಮ್ಮೆ. ಹೇಳ್ತೀನಿ ಕೇಳಿ, ಅದು ಕೊಡಗಿನ ಮಾತು ನೀರಿಲ್ಲದ ಕೆರೇಲಿ ಬೇರಿಲ್ಲದ ತಾವರೆ ಅನ್ನೋದು ಒಂದು ಒಗಟು. ಅದಕ್ಕೆ ಉತ್ತರ ಏನೂಂದ್ರೆ ಸೂರ್ಯ. ನಾನೇನು ಮಾಡಿದೆ ? ಆ ಒಗಟನ್ನು ತಗೊಂಡು ನಾಲ್ಕು ಪಂಕ್ತಿ ಮಾಡಿದೆ: 'ಏರಿ ಇಲ್ಲದ ಕೆರೇಲಿ ಬೇರು ಇಲ್ಲದ ತಾವರೆ, ಲೋಕ ಆಡೋ ಆಟ ಎಲ್ಲಾ ನೋಡತಾ ಇದ್ದಾನೆ, ದೇವರು ಕದ ಮುಚ್ಚಿದಿ, ಅಡ್ಡವಾಯ್ತೆ? ಸೊಡರು ಆರಿಸು, ಕತ್ತಲೆ ? ಮನಸಲಿ ಎಣಿಕೆ ಮಾಡೋ ಮುನ್ನ ಮನ ಅವನೆದುರಲಿ ಬತ್ತಲೆ."

## ವೇದಕಾಲದ ಆದರ್ಶ

ಕೆ.ಎನ್. : 'ಏಕೋರಸಃ ಕರುಣಾಏವ' ಎನ್ನುವಂತೆ ನಮ್ಮ ಆದಿ ಕವಿಯಿಂದ ಆರಂಭವಾದ ಸಾಹಿತ್ಯ ಸಂಪ್ರದಾಯದ ಅನುಕಂಪವೇ ತಮ್ಮ ಕೃತಿಗಳ ಜೀವನಾಡಿ ಎನಿಸುತ್ತದೆ. ತಮ್ಮ ಕೃತಿಗಳಲ್ಲಿ ನೋಯುವ ಎಲ್ಲ ವರ್ಗಗಳ ಬಗ್ಗೆ ಅಪಾರ ಅನುಕಂಪ ಕಾಣುತ್ತೇವೆ. ನಮ್ಮ ಸಮಾಜ ದಲ್ಲಿ ಎಲ್ಲ ಶೋಷಿತರನ್ನು, ಹೆಣ್ಣನ್ನು ನೋಡುವ ರೀತಿಯಲ್ಲಿ ಯಾವ ಬದಲಾವಣೆ ಆಗಬೇಕು ಎನಿಸುತ್ತದೆ ?

ಮಾಸ್ತಿ :ನೋಡಿ, ನನಗೆ ಪ್ರಭಾವ ಆಗಿದೆ. ವೇದ ಕಾಲದ ಆದರ್ಶ ಇದೆಯಲ್ಲ

ಆದು ನನಗೆ ತುಂಬ ಮನಸ್ಸಿಗೆ ಮುಟ್ಟಿಬಿಟ್ಟದೆ. ಆ ಹೆಣ್ಣುಮಕ್ಕಳು ಹೇಗೆ ನಡಕೋತಾ ಇದ್ರು! ಯಾಜ್ಞವಲ್ಕ್ಯನ ಹೆಂಡತಿ ಮೈತ್ರೇಯಿ ಹೇಗೆ ನಡೆದುಕೊಂಡ್ಲು ನೋಡಿ. ಆವನು ಎಲ್ಲ ನಿನಗೆ ಬಿಟ್ಟು ಹೋಗ್ತೀನಿ ಅಂದಾಗ. ಸರಿ, ನೀವು ಕೊಟ್ಟರೆ ನಾನು ಅಮರಳಾಗ್ತೀನಾ ಅಂತ ಕೇಳ್ತಾಳೆ. ನೀನು ಹ್ಯಾಗೆ ಅಮರಳಾಗ್ತಿಯ ಮೈತ್ರೇಯಿ? ಇದ್ದ ಜೀವನದ ಮಾತಿಗೆ ನಾನು ಹೇಳಿದ್ದು ಊಟಕ್ಕಿರ್ಲಿಂತ ಮಾಡಿ ಕೊಡ್ತಿದೀನಿ ಅದಕ್ಕೆ ಬೆಲೆ ಇರಬೇಕು ಎಂದು ಯಾವುದರಿಂದ ನನ್ನ ಆತ್ಮ ಅಮರವಾಗುವುದಿಲ್ಲವೊ ಅದನ್ನು ಕಟ್ಟಿಕೊಂಡು ಏನು ಮಾಡಲಿ ಎಂದಳು ಮೈತ್ರೇಯಿ. ಯಾವುದರಿಂದ ನಾನು ಅಮೃತವಾಗುವುದಿಲ್ಲವೊ ಅದನ್ನು ಕಟ್ಟಿಕೊಂಡು ಏನು ಮಾಡಿಕೊಳ್ಳಲಿ ಅಂತ ಕೇಳ್ತಾಳೆ ಅವಳು. ಅದನ್ನು ನನ್ನ ದೇಶ ಸದಾ ಕಾಲಕ್ಕೂ ಹೇಳುತ್ತೆ ಇವು ಬಹು ದೊಡ್ಡ ಮೌಲ್ಯಗಳು. ವಾಲ್ಮೀಕಿ ಏಕೆ ದೊಡ್ಡವನು ಎಂದ್ರೆ ಆದಕ್ಕಾಗಿ ದೊಡ್ಡವನು ಎಲ್ಲ ಜೀವಿತದ ನೋವು ಇವನ್ನನ ತಟ್ಟಿಬಿಡ್ತಲ್ಲ ಒಂದು ಹಕ್ಕಿಯಿಂದ,

ಕೆ.ಎನ್. : ಜೀವನದಲ್ಲ ಕ್ರೌರ್ಯ ದುಷ್ಟತನ, ಹಿಂಸೆ ಇವುಗಳ ಅಸ್ತಿತ್ವವನ್ನು ನೀವು ಸಾಹಿತ್ಯದಲ್ಲಿ ಗುರುತಿಸಿದ್ದೀರಿ. ಅವು ಪರಿಸರದಿಂದ ಹುಟ್ಟುವ, ಉಲ್ಬಣಿಸುವ ದೌರ್ಬಲಗಳೆ? ಅಥವಾ ಮೂಲಭೂತವಾಗಿ ಸ್ವಭಾವಜನ್ಯವೇ?

ಮಾಸ್ತಿ : ನಾವು ಯಾರು ಕೆಟ್ಟವರಾಗಬಹುದು. ಇಂಗ್ಲಿಷ್ ಜಡ್ಜ್ ಒಬ್ಬ ಹೇಳಿದ್ದು ಕೇಳಿದೀರಲ್ಲ, ಯಾವನೋ ಒಬ್ಬನ್ನ ತಪ್ಪು ಮಾಡಿದ ಅಂತ ಎಳಕೊಂಡು ಬಂದರಂತೆ. ಆವನು ಅಪರಾಧಿ, ತೀರ್ಪು ಕೊಟ್ಟ ಅಪರಾಧಿಯನ್ನು ಎಳೆದುಕೊಂದು ಹೋದಹಾಗೆ ಜಡ್ಜ್ ಹೇಳಿದನಂತೆ- 'ದೇರ್, ಬಟ್ ಫಾರ್ ದಿ ಗ್ರೇಸ್ ಆಫ್ ದಿ ಗಾಡ್ ಗೋಸ್ ದಿಸ್ ಮ್ಯಾನ್' ಎಂದು ತನ್ನ ತೋರಿಸಿಕೊಂಡು. ಅಂದ್ರೆ ಏನು ? ಗ್ರಹಚಾರ ಅವನದು ಆ ದಾರೀಲಿ ಕರೆದುಕೊಂಡು ಹೋಯಿತು, ಇವನ ಗ್ರಹಚಾರ ಹೀಗಿತ್ತು ಈ ಕಡೆ ಬಂದು ಬದುಕಿಕೊಂಡ. ಅವನ ಗ್ರಹಚಾರ ಹಾಗಿತ್ತು ಅವನು ಕೆಟ್ಟ ದಾರಿ ಹಿಡಿದ. ದಾರಿ ಕವಲು, ಅವನ ಜೀವನ ಆ ಕಡೆ ಹೋಗಿಬಿತ್ತು, ಆದರಿಂದ ಮನುಷ್ಯ ಸ್ವಭಾವ ವಾಗಿ ಕೆಟ್ಟವನೂ ಆಗಬಹುದು, ಒಳ್ಳೆಯವನೂ ಆಗಬಹುದು ಕರಕೊಂಡು ಹೋಗಲಿಕ್ಕೆ ಒಂದು ದಾರಿಬೇಕು – ದೇವರು ಅಥವಾ ಅದೃಷ್ಟ ಅನ್ನಬಹುದು. ಅಂದ್ರೆ ನೋಡಿ ನಾನು ಇದನ್ನೆಲ್ಲ

ಯೋಚಿಸಿದೆ ಅಂತ ಅಲ್ಲ. ಇದು ನನ್ನಲಿತ್ತು, ನನ್ನ ಸ್ವಭಾವದಲ್ಲಿತ್ತು, ನನಗೆ ಇಂತಹವರನ್ನು ಕಂಡ್ರೆ ಕೋಪ ಇಲ್ಲ ಅಯ್ಯೊ ಪಾಪವೇ ಅನ್ನಿಸುತ್ತೆ ಬೇಲೂರು ಶ್ರೀನಿವಾಸ ಐಯಂಗಾರ್ಯ್ರರನ್ನ ಕೊಂದನಲ್ಲ ಚಂಡಾಲ, ಕೃಷ್ಣ ಅವನ ವಿಷಯದಲ್ಲೂ ನನಗೆ ಹಾಗೆ ಅನ್ನಿಸುತ್ತೆ ಅಯ್ಯೋ ಪಾಪವೇ ಅಂತ.

ಕೆ.ಎನ್. : ಅದು 19ನೇ ಶತಮಾನದ ರೊಮ್ಯಾಂಟಿಕ್ ಇಂಗ್ಲಿಷ್ ಸಾಹಿತ್ಯದಲ್ಲಿ ಒಂದು ಮುಖ್ಯ ಭಾವನೆ.

ಮಾಸ್ತಿ : ಹೌದು.

ಕೆ.ಎನ್. : ಶೆಲ್ಲಿ ಇಂತಹ ಅನುಕಂಪದ ಆದರ್ಶಕ್ಕೆ ಮೊದಲಿನಿಂದಲೂ ಅಭಿವ್ಯಕ್ತಿ ನೀಡಿದ್ದಾನೆ.

ಮಾಸ್ತಿ : ಹಾಗೇ ನೋಡಿದ್ರೆ ಶೆಲ್ಲಿ ಕೀಟ್ಸ್, ವರ್ಡ್ಸ್‌ವರ್ತ್ ಇವರೆಲ್ಲ ನನ್ನ ಮೇಲೆ ಪ್ರಭಾವ ಬೀರಿದ್ದಾರೆ.

ಕೆ.ಎನ್. : ವರ್ಡ್ಸ್‌ವರ್ತ್‌ನ ಕಥನ ಕವನಗಳು ಕೊಂಚಮಟ್ಟಿಗೆ....

ಮಾಸ್ತಿ : ಇಲ್ಲ ಇಲ್ಲವೇ ಇಲ್ಲ. ವರ್ಡ್ಸ್‌ವರ್ತ್ ಕಥನ ಕವನಗಳನ್ನು ನಾನು ಓದಿದೀನಿ. ಆದರೆ ನನ್ನ ಶೈಲಿ ಅದಕಿಂತ ತೀರ ಭಿನ್ನವಾದುದು.

## ಸರಳರಗಳೆಯ ಪ್ರವರ್ತಕ

ಕೆ.ಎನ್. : ಬ್ಲಾಂಕ್‌ವರ್ಸ್ ನೀವು ಮೊದಲು ಉಪಯೋಗಿಸಿದಿರಲ್ಲ ಅದನ್ನ ಶೇಕ್ಸ್‌ಪಿಯರ್‌ನಿಂದ ತೆಗದುಕೊಂಡರೋ ಅಥವಾ ವರ್ಡ್ಸ್‌ವರ್ತ್ ನಿಂದಲೋ ಅಥವಾ...

ಮಾಸ್ತಿ : ಬ್ಲಾಂಕ್ ವರ್ಸ್ ಬಂತು, ಏಕೇಂದ್ರೆ, ನನಗೆ ಒಂದು ವರ್ಸ್ ಬೇಕಾಗಿತ್ತು, ನಾನು ಇದನ್ನ ಯಾವಾಗ ಕಂಡುಕೊಂಡೆ ಅಂದ್ರೆ 1924ರಲ್ಲಿ ಮಧುಗಿರಿ ಯಲ್ಲಿ ಇದ್ದಾಗ. ಹ್ಯಾಮ್ಲೆಟ್ ಟ್ರಾನ್ಸ್‌ಲೇಟ್ ಮಾಡಬೇಕು ಅಂತ ಆಸೆ ಉಂಟಾಯಿತು. ಅದಕೊಂದು ವರ್ಸ್ ಬೇಕಲ್ಲ - ಪಂಕ್ತಿ ಪಂಕ್ತಿ ಯಾಗ್ಲಿಕ್ಕೆ ಅಂತ ಇದನ್ನು ದೂಡಿಕೊಂಡದ್ದು,

ಉಳಿವುದೆ ಅಳಿವುದೆ –

ಇದುವೆ ಸಮಸ್ಯೆ

ಕೆ.ಎನ್. : "ಟು ಬಿ ಆರ್ ನಾಟ್ ಟು ಬಿ, ದಟ್ ಈಸ್ ದಿ ಕ್ವೆಸ್ಚನ್."

ಮಾಸ್ತಿ : ಬಹಳ ಚೆನ್ನಾಗಿ ಆಗುತ್ತೆ ಅನ್ನಿಸ್ತು ಹಾಗೆ ಹಿಡಿದುಕೊಂಡೆ.

ಕೆ.ಎನ್. : ಹಾಗೇ ಉಳಿದುಹೋಯಿತು, ನಿಮ್ಮದೇನೇ ಮೊದಲ ಸರಳ ರಗಳೆ ಕನ್ನಡದಲ್ಲಿ,

ಮಾಸ್ತಿ : ಕನ್ನಡದಲ್ಲಿ ಸರಳ ರಗಳೆ ಅಂತ ಹೆಸರೇ ಇರಲಿಲ್ಲ.

ಕೆ.ಎಸ್.: ತಾವೇನೋ ಇಟ್ಟಿದ್ದು ?

ಮಾಸ್ತಿ : ನಾನಿಡಲಿಲ್ಲ. ವೆಂಕಣ್ಣಯ್ಯ ಇಟ್ಟರು.

ಕೆ.ಎಸ್.: ಕ್ರೌರ್ಯ ದುಷ್ಟತನ ಹಿಂಸೆಗಳನ್ನು ತಾವು ಸಾಹಿತ್ಯದಲ್ಲಿ ಗುರುತಿಸಿದ್ದೀರಿ. ಅವುಗಳನ್ನು ಎದುರಿಸುವುದರಲ್ಲಿ ತಾವು ಒತ್ತಿ ಹೇಳುವುದು ನೀತಿ ಮಂತರು ತಮ್ಮ ನಿಷ್ಠೆಯನ್ನು ಬಿಡದಿರುವುದು. ಋಜು ಮಾರ್ಗದಲ್ಲಿ ಹೋಗದವರನ್ನೂ ಋಜು ಮಾರ್ಗಕ್ಕೆ ಬರುವಂತೆ ಒಲಿಸಿಕೊಳ್ಳುವುದು ಸಹನೆ, ಮನಶ್ಶಾಂತಿ ಹೆಚ್ಚಾಗಿ ಈ ಗುಣಗಳನ್ನು ಎಂಬ ಅಭಿಪ್ರಾಯ ಸರಿಯೆ ?

ಮಾಸ್ತಿ : ಅದೇ ಸರಿ ನನ್ನ ಮನಸ್ಸಿಗೆ. ಏನು ಮಾಡಬೇಕಪ್ಪ ಅಂತಂದ್ರೆ ನೇಮಯ್ಯನಂತಹ ("ಚೆನ್ನಬಸವ ನಾಯಕ" ಕಾದಂಬರಿಯ ಪಾತ್ರ) ಮನುಷ್ಯರು ಯಾವುದೋ ಒಂದು ಕಾರಣದಿಂದ ನಿಸ್ತೇಜರಾಗ ಬಾರದು. ನಿಸ್ಸತ್ವರಾಗಬಾರದು. ಸತ್ಯ ಹೇಳಬೇಕು.

ಕೆ.ಎಸ್. : ತಮ್ಮ 'ಚೆನ್ನಬಸವ ನಾಯಕ' ಮತ್ತು 'ಚಿಕವೀರ ರಜೇಂದ್ರ' ಅಷ್ಟೇಕೆ ತಮ್ಮ 'ನಿಜಗಲ್ಲಿನ ರಾಣಿಯಂತಹ ಸಣ್ಣ ಕತೆಯೂ ಸಹ ಹಿಂದಿನ ಇತಿ ಹಾಸದಲ್ಲಿ ವೈಭವದ ಕಾಲವನ್ನು ಆಯ್ದುಕೊಳ್ಳದೆ ಅವನತಿಯ ಕಾಲ ವನ್ನು ಆಯ್ದುಕೊಂಡು ಅದರ ಕಾರಣಗಳನ್ನು ಶೋಧಿಸುತ್ತವೆ. ಇಂದಿನ ಕಾಲಕ್ಕೆ ಎಚ್ಚರಿಕೆ ನೀಡುತ್ತವೆ. ತಮಗೆ ಇಂಥ ದುರಂತ ವಸ್ತು ಹೆಚ್ಚು ಸಂದರ್ಭೋಚಿತ ಅರ್ಥಪೂರ್ಣ ಎನ್ನಿಸಿತೆ ?

ಮಾಸ್ತಿ : ಅದಕ್ಕೇನೆ. ವೈಭವ ವರ್ಣಿಸಿ ಏನು ಪ್ರಯೋಜನ ಇವತ್ತು ?

ಕೆ.ಎಸ್. : ನಾನು ಸಂದರ್ಭೋಚಿತ ಅಂತ ಯಾಕಂದೆ ಅಂದ್ರೆ ಸ್ವಾತಂತ್ರ್ಯಪೂರ್ವ ದಲ್ಲಿ ಸ್ವಲ್ಪಮಟ್ಟಿಗೆ ನಮ್ಮ ಅಭಿಮಾನವನ್ನ ಹೆಚ್ಚಿಸಲು ಹಿಂದಿನ ಹಿರಿಮೆಯ ಆದರ್ಶೀಕರಣ...

ಮಾಸ್ತಿ : ಅದನ್ನೂ ಬೇರೆ ಕಥೆಗಳಲ್ಲಿ ಬರೆದಿದ್ದೀನಿ. ಉದಾಹರಣೆಗೆ 'ಪಂಡಿತನ ಮರಣ ಶಾಸನ'. ನಾನು ಸಣ್ಣ ಕಥೆಗಳಲ್ಲಿ ಒಳ್ಳೆ ಜನರನ್ನೂ ಚಿತ್ರಿಸಿ ದ್ದೀನಿ. ಇದು ದೊಡ್ಡ ಕತೆ. ಇದು ಒಂದು ದುರಂತ ಕತೆ. ಇದು ಶೇಕ್ಸ್‌ಪಿಯರನ ದುರಂತ ನಾಟಕಗಳ ಕಾಲಕ್ಕೆ ಪರ್ಯಾಯ. ಸ್ವಲ್ಪ ಹೆಚ್ಚೂ ಕಡಿಮೆ ನಾನು ಶೇಕ್ಸ್‌ಪಿಯರ್‌ನ ಸಂತಾನ.

ಕೆ.ಎಸ್. : ಇತ್ಲಾ ಕಡೆ ವಾಲ್ಮೀಕಿ ಅತ್ಲಾ ಕಡೆ ಶೇಕ್ಸ್‌ಪಿಯರ್.

ಮಾಸ್ತಿ : ಹೌದು. ಆ ಸಂತಾನಕ್ಕೆ ಸೇರಿದವನು ನಾನು.

ಕೆ.ಎಸ್.: ತಾವು ನಮ್ಮ ಸಾಹಿತ್ಯದ ವೃದ್ಧ ಪಿತಾಮಹರು. ಇಂದಿನ ಪೀಳಿಗೆಯ ಲೇಖಕರಿಗೆ ತಮ್ಮ ಹಿತವಚನವೇನು ?

ಮಾಸ್ತಿ : ಸಂದೇಶ ಯಾಕೆ ಕೊಡಬೇಕು. ನಾನು ಯಾವ ಊರಿನ ದಾಸಯ್ಯ.

ಕೆ.ಎನ್. : ದಾಸಯ್ಯನೇ ಹೇಳೋದು. ಪುರಂದರದಾಸರು ಹೇಳದೆ 'ಇನ್ನಾರು ಹೇಳುತ್ತಾರೆ,
ದಾಸಯ್ಯನ ಕೈಯಲ್ಲೇ ನಾವು ಕೇಳೋದು.

ಕೆ.ಎನ್. : ತಾವು ಮೊದಲಿನಿಂದಲೂ ಪ್ರತಿಪಾದಿಸುತ್ತಾ, ಆಚರಣೆಯಲ್ಲಿ ಅನುಸರಿಸುತ್ತ ಬಂದಿರುವ ಗುಣಗಳಾದ 'ಸ್ವೀಟ್‌ನೆಸ್ ಅಂಡ್ ಲೈಟ್'–ಜೀವ ಮಾಧುರ್ಯ, ಪ್ರಭೋಧನೆ ಮತ್ತು ಪ್ರಕಾಶ ಜನತೆಯ ಜೀವನದಲ್ಲಿ ಪ್ರಸರಿಸಲು ನಾವುಗಳು ಕೈಕೊಳ್ಳಬೇಕಾದ ಕ್ರಮಗಳೇನು ?

ಮಾಸ್ತಿ : ನಂಬಿಕೆ ಇರಬೇಕಲ್ಲ. ಶ್ರೇಷ್ಠ ಮೌಲ್ಯಗಳಲ್ಲಿ ನಂಬಿಕೆ ನಾವು ಬೆಳಸಿಕೇಬೇಕೋ ಬೇಡವೊ ? ಕೈಯಲ್ಲಿ ಲಾಂಟಾನ ಹಿಡಿದು ಮಲ್ಲಿಗೆ ವಾಸನೆ ಬರಲಿಲ್ಲ ಅಂದ್ರೆ ಹೇಗೆ ? ಪ್ರೇರಣೆ ಆಗಿರಬೇಕು. ನೀವು ಒಳ್ಳೆಯದನ್ನ ಯೋಚನೆ ಮಾಡಿ, ಒಳ್ಳೇ ಸಂಗತಿ ಬಯಸಿ ಅಂತ ಪ್ರೇರಣೆ ಆಗಬೇಕು. ಲೇಖಕ ಒಳ್ಳೇದು ಮಾಡಬೇಕು ಅಂತ ಹೋಗಬೇಕಲ್ಲ. ಜನರಲ್ಲೇ ಜಗಳ ಹುಟ್ಟಿಸೋದು ತಪ್ಪು. ಕಾವ್ಯ ಬರೆಯೋದರಲ್ಲಿ ಅಸಭ್ಯ. ಅವಾಚ್ಯವಾದದ್ದು ಸಲ್ಲದು. ಕೇಶಿರಾಜ 900 ವರ್ಷದ ಹಿಂದೇನೇ ಹೇಳಿದ್ದಾನೆ. ಅವಾಚ್ಯವಾದದ್ದನ್ನ ಹೇಳುವುದು ಬೇಡ ಅಂತ. ಎಂತಹ ಮರ್ಯಾದೆವಂತ ದೇಶ ನಮ್ಮದು ! ಎಂತಹ ಜನ ನಮ್ಮವರು।

" ಸಾಹಿತ್ಯವೆನ್ನುವುದು ಬರಿಯ ಪುಸ್ತಕಗಳ ಸಮುದಾಯವಲ್ಲ; ಅದರ ಮೊದಲು ಮಾನವ ಹೃದಯದಲ್ಲಿ; ಅದರ ಕೊನೆ ಮಾನವ ಹೃದಯದಲ್ಲಿ; ಕಾವ್ಯವು ಕವಿ ಮತ್ತು ಪಾಠಕರ ಮನಸ್ಸಿಗೆ ಸಂಬಂಧವನ್ನುಂಟುಮಾಡುವ ಸಾಧನ. ಉತ್ತಮ ಸಾಹಿತ್ಯವು ಮೂಲದಲ್ಲಿ ಉತ್ತಮವಾಗಿರಬೇಕು, ರೂಪದಲ್ಲಿ ಉತ್ತಮವಾಗಿರಬೇಕು, ಅಂತ್ಯದ ಫಲದಲ್ಲಿ ಉತ್ತಮವಾಗಿರಬೇಕು. ಇವನ್ನು ಗ್ರಹಿಸಿದರೆ ಗ್ರಂಥಕರ್ತನು ತನ್ನ ಸ್ವಾತಂತ್ರ್ಯಕ್ಕಾಗಿ ಎಷ್ಟು ಆತುರದಿಂದ ಹೊಡೆದಾಡುವನೋ ಅಷ್ಟು ಆತುರದಿಂದ ಪಾಠಕರ ಕ್ಷೇಮವನ್ನೂ ಯೋಚಿಸುವನು. ಪಾಠಕನು ತನ್ನ ಕ್ಷೇಮವನ್ನು ಕುರಿತು ಎಷ್ಟು ಶ್ರದ್ಧೆಯಿಂದ ಯೋಚಿಸುವನೋ ಅಷ್ಟೂ ಶ್ರದ್ಧೆಯಿಂದ ಗ್ರಂಥಕರ್ತನಿಗೆ ಸ್ವಾತಂತ್ರ್ಯವನ್ನು ಬಿಡಲು ಒಪ್ಪುವನು. ಒಬ್ಬರನ್ನೊಬ್ಬರು ವಿರೋಧ ಪಕ್ಷವೆಂದು ಎಣಿಸರು. ಸಾಹಿತ್ಯ ತಾನಾಗಿಯೇ ಉತ್ತಮ ಸ್ಥಿತಿಗೆ ಬಂದು ತನ್ನ ಕರ್ತವ್ಯವನ್ನು ನೆರವೇರಿಸುವುದು. ಹೀಗಾಗುವುದರಿಂದ ಜನಾಂಗ ಮುಂದಕ್ಕೆ ಬರುವುದು."

**ಮಾಸ್ತಿ ವೆಂಕಟೇಶ ಅಯ್ಯಂಗಾರ್**
(ಸಾಹಿತ್ಯ)

# ಮಾಸ್ತಿ : ಒಂದು ಸಂದರ್ಶನ

ವಿಜಯಾ

ನಗೆಮೊಗದಿಂದ ಎದಿಗೊಂಡು "ಕುಶಲವೇ" ಎಂದಾದರಿಸಿದ ನಿರಹಂಕೃತಿಯ ಸಾಕಾರಮೂರ್ತಿ ಮಾಸ್ತಿವೆಂಕಟೇಶ ಅಯ್ಯಂಗಾರ್ಯರ ದರ್ಶನ ಅಂದು ಮನಸ್ಸಿಗೆ ತಂಪೆನಿಸಿತ್ತು.

ತುಂಬು ಹೃದಯದಿಂದ ಆಶೀರ್ವದಿಸುತ್ತ ಆಸನವಿತ್ತು ಕುಳ್ಳಿರಿಸುವ ಸಂಭ್ರಮ, ಸಜ್ಜನಿಕೆ ಮಾಸ್ತಿಯವರೊಬ್ಬರೇ ಅಲ್ಲ, ಅವರ ಮನೆಯವುಂದಿಗೇ ಪರಂಪರಾಗತ ವಾಗಿ ಒಗ್ಗಿ ಅಂಟಿ ಬಂದ ಸ್ವಭಾವ.

ಎಳೆತನದಿಂದ 'ಮಾಸ್ತಿ' ಎಂಬ ಶಬ್ದವೇ ವಿಚಿತ್ರ ಅನುಭೂತಿಗಳನ್ನು ತುಂಬಿ ಕೊಡುತ್ತಿದ್ದ ದಿನಗಳೂ ಇದ್ದವು. ಬೆಂಗಳೂರುವಾಸ, ಸಮೀಪದಲ್ಲೇ ಮಾಸ್ತಿ. ಪತ್ರಿಕೋದ್ಯಮಿಯಾಗಿ ಅವರನ್ನೇ ಭೆಟ್ಟಿಯಾಗುವ ಸಂದರ್ಭ ಕೂಡಿ ಬಂದಾಗ ಭಾವನೆ ಮೂಕವಾಗಿತ್ತು.

ಇತ್ತೀಚಿನ ಸಾಹಿತ್ಯವನ್ನೂ ಓದುತ್ತ ಅವರಿವರು ಮಾಸ್ತಿಯವರ ಬಗ್ಗೆ ಮಾಡಿರುವ ಟೀಕೆ ಕಂಡಾಗ ಮತ್ತೊಮ್ಮೆ ಕೃತಿ ಓದಿಯೂ ಅಂದೆಂದೋ ಅನುಭವಿಸಿದ ಸಂವೇದನೆಗೆ ಹೊರತಾಗದೆ ಉಳಿದಾಗ ಇದಾವುದೋ ಅತೀತ ವ್ಯಕ್ತಿತ್ವ ಎನಿಸಿ ಅನೇಕ ಸಂದೇಹಗಳ ನಡುವೆ ಅವರನ್ನು ಭೆಟ್ಟಿಯಾಗಿದ್ದೆ. ಅಂದು ಹೊಸತೆನಿಸಿದ್ದರೂ, ಕುತೂಹಲ ತುಂಬಿದ್ದರೂ ಅನಂತರದ ದಿನಗಳಲ್ಲಿ ಮಾಸ್ತಿ ತುಂಬ ಹತ್ತಿರದವರೆನಿಸು ವಷ್ಟು ಸಹಜವಾದ ಒಡನಾಟ-ಬಹುಶಃ ನನ್ನ ಬದುಕಿನಲ್ಲಿದ್ದ ದೊಡ್ಡ ಕೊರತೆಯಾದ ಆತ್ಮೀಯತೆ, ವಾತ್ಸಲ್ಯಗಳನ್ನ ತುಂಬಿಕೊಳ್ಳುವ ಸ್ವಾರ್ಥಿಯಾಗೇ ಅವರೊಡನೆ ಸಂಭಾಷಿಸುವ ಸ್ವಾರ್ಥಿಯೂ ಆಗಿಬಿಟ್ಟೆ.

ಎಂಬತ್ತೆರಡು ವಸಂತಗಳಲ್ಲಿ ಕಂಡ-ಉಂಡನೋವು, ನಲಿವು-ಏನೆಲ್ಲ ತುಂಬಿ ಕೊಂಡ ಆ ದೇಹದಲ್ಲಿನ್ನೂ ಚೈತನ್ಯವಾಹಿನಿಯ ಸೆಲೆ ಚಿರಂತನವಾಗಿ ಉಕ್ಕಿ ಬರುತ್ತಿರು ವುದರ ಕಾರಣ ಅಲ್ಲಿ ಮೂಡಿ, ಬೆಳೆದು ಬಂದ ಜೀವನ ಶ್ರದ್ಧೆಯ ಫಲವೆನಿಸಿತ್ತು. ನಗುಮುಖ, ಅರಳಿದ ಕಣ್ಣು, ನುಡಿಯಲ್ಲೆಲ್ಲೂ ಎಂದೂ ತಪ್ಪದ ದೃಢತೆ ಅವರ ಬದುಕಿನಲ್ಲಿ ನಡೆಸಿಕೊಂಡು ಬಂದ ನಿಯಮಗಳಿದ್ದ ಹಾಗೆ.

ಮಾಸ್ತಿ ಆಯ್ದುಕೊಳ್ಳದ ವಸ್ತುವಿಲ್ಲ. ಕೈ ಆಡಿಸಿದ ಪ್ರಕಾರವಿಲ್ಲ. ಬದುಕಿನ ಅನಂತ ಮುಖಗಳಲ್ಲಿ ತನ್ನನ್ನು ತಾನೇ ಲೀನವಾಗಿಸಿಕೊಂಡು, ಕಂಡದ್ದು, ಕೇಳಿದ್ದು ಎಲ್ಲಾ ಲೇಖನಿಗೆ ಆಹಾರವಾಗಿಸಿ, ಕಲ್ಪನೆಯ ಕುಸುರಿಗೆಲಸದ ನಡುವೆ ಸ್ಪಷ್ಟವಾಗಿಯೇ

ಸತ್ಯ ಸಾಕ್ಷಾತ್ಕಾರ ಮಾಡಿಸುವ, ಸರಳ ಕನ್ನಡದ ಸ್ವಾಮ್ಯಪಡೆದ ನಮ್ಮ ಮಾಸ್ತಿಯೇ ಮೊಟ್ಟಮೊದಲು ಕನ್ನಡಕ್ಕೆ ಸಣ್ಣಕತೆಯ ಸೊಗಸನ್ನು ಓದಿಸಿದ 'ಶ್ರೀನಿವಾ'ಸ ಹೌದೆನ್ನಲು ಹೆಮ್ಮೆ ಎನಿಸುತ್ತದೆ.

ನಾಟಕ ವಿಮರ್ಶೆ, ಪ್ರಬಂಧ. ಕಾದಂಬರಿ. 'ಜೀವನ' ಮಾಸಪತ್ರಿಕೆಯ ಸಂಪಾದಕತ್ವ ಹೀಗೆ ಏನೆಲ್ಲ ರೀತಿಯಲ್ಲಿ ಸಾಹಿತ್ಯಕೃಷಿ ನಡೆಸಿ ಪಡೆದ ಪೈರು ಸಾಧಾರಣದ್ದಲ್ಲವಾದರೂ ಕನ್ನಡದ ಜನಕ್ಕೆ 'ಸಣ್ಣಕತೆಯ ಜನಕ ಶ್ರೀನಿವಾಸ'ರೆಂದೇ ಹೆಚ್ಚು ಪರಿಚಿತರಾದ ಮಾಸ್ತಿ, ಕನ್ನಡ ಬರೆಯುವುದಂತಿರಲಿ, ನುಡಿಯಲೂ ಜನ ಹೆದರಿ ಹಿಂದೆಗೆಯುತ್ತ ಕೇವಲ ಬ್ರಿಟಿಷ್ ಸಾಮ್ರಾಜ್ಯ ಶಾಹಿಯ ಗುಲಾಮಗಿರಿಯಲ್ಲಿ ಅವರದೇ ಅನುಕರಣೆಯಲ್ಲಿ 'ತನ್ನ'ತನ ಮರೆತಿದ್ದ ಕಾಲದಲ್ಲಿ ದಿಟ್ಟತನದಿಂದ ಮುನ್ನಡೆದರು. 'ಕನ್ನಡ ಧ್ವಜ' ಎತ್ತಿದ ಉನ್ನತ ಸರಕಾರೀ ಅಧಿಕಾರಿ. ಹಿತತಾರದ ಅಧಿಕಾರ ತೊರೆದ ಮೇಲೆ ಸ್ವಸಾಮರ್ಥ್ಯದಿಂದ ನಿಂತು, ದುಡಿದು ಸ್ವಯಂಭೂತ ನಾಗಿ ಬೆಳೆದು ಮಾದರಿಯಾದ ಮಾಸ್ತಿಯೇ ನಮ್ಮ ಆಸ್ತಿ ಎಂದು ಜನ ನಂಬಿ ಕೊಂಡಿದ್ದರಲ್ಲಿ ಅತಿಶಯವೇನಿದೆ ?

ಸಣ್ಣ ಕತೆಯ ಸಂದರ್ಭದಲ್ಲಿ ಬಹುದೊಡ್ಡ ಹೆಸರು ಮಾಸ್ತಿಯವರದು. ಗದ್ಯಕ್ಕೆ ಒಂದು ಹೊಸರೂಪವನ್ನು ಕೊಟ್ಟವರೆಂಬುದೇನೂ ಉತ್ಪ್ರೇಕ್ಷೆಯಮಾತಲ್ಲ. ಮಾಸ್ತಿಯವರ ಎಲ್ಲ ಕತೆಗಳನ್ನೂ ಆರಿಸಿ ಕಾಲಾನುಕ್ರಮದಂತೆ ಬೆಳವಣಿಗೆಯನ್ನು ಗುರುತಿಸುವುದಂತೂ ಸಾಧ್ಯವೇ ಇಲ್ಲ. ಆರಂಭದಲ್ಲಿ ಬರೆದ ಕತೆ ಸಾಮಾಜಿಕ ಕಳಕಳಿಯಿಂದ ಕೂಡಿದ ವಿಶೇಷ ಕೃತಿಯಾಗಿ ನಡುವಂತರದ ಯಾವುದೋ ಕತೆ ತೀರ ಭಾವುಕವೆನಿಸಿಬಿಡುವುದೂಉಂಟು. ಅನೇಕ ಸಂದರ್ಭಗಳಲ್ಲಿ ಮಾಸ್ತಿಯವ ರಿಂದ ಯಾವ ಕಥಾವಸ್ತು, ಹೇಗೆ ಮೂಡಿಬಂದಿದೆ ಎಂಬುದನ್ನು ಗುರುತಿಸುವುದೇ ಕಷ್ಟವಾಗಿ ಬಿಡುತ್ತದೆ. ಮಾಸ್ತಿ ಎಷ್ಟು ಸರಳವಾಗಿ ಬರೆಯುತ್ತಾರೋ ಅಷ್ಟೇ ಸುಲಭವಾಗಿ ಅರ್ಥವಾಗುವವರಲ್ಲ ಅವರ ನಗೆಚಾಟಿಕೆಯಲ್ಲಿ, ಕಾಲಕ್ಷೇಪದಲ್ಲಿ, ಉತ್ಸಾಹದಿಂದ ಮಾತಾಡುವಾಗ ಹೇಳುವ ಘಟನೆಗಳು ಕತೆಯಾದಾಗ ಅಷ್ಟೆ ಪ್ರಭಾವ ಪೂರ್ಣವಾಗಿ ಮೂಡಿ ಬಂದಿಲ್ಲ ಎನ್ನುವ ಅವರು ಹತ್ತಿರದ ಸ್ನೇಹಿತರ ಪ್ರೀತಿಯ ಆಕ್ಷೇಪಣೆಯೂ ಅವರ ಮೇಲಿದೆ.

ಮಾಸ್ತಿ ಕತೆ ಚೆನ್ನಾಗಿ ಹೇಳುತ್ತಾರೆ. ಓದುಗನ ಭಾವನೆಯೊಂದಿಗೆ ಇವರ ಕಥೆಯ ಪಾತ್ರಗಳು ಚೆಲ್ಲಾಟವಾಡಿಬಿಡುತ್ತವೆ. ಸಾಮಾಜಿಕ ಪ್ರಜ್ಞೆಯ ಕಳಕಳಿ ತೀರ ಸಹಜವಾಗಿ ಮೂಡಿಬರುವ ಕತೆಯಲ್ಲೂ ಮಾಸ್ತಿ ಅವರು ಸಿದ್ಧಾಂತಗಳನ್ನ–ಸಮಾಧಾನಗಳನ್ನ ಹೇಳುವುದಿಲ್ಲ ಎಂಬುದೊಂದು ಸಮಾಧಾನ. ಮಾಸ್ತಿ ಕತೆ, ಪದ್ಯಗಳಲ್ಲಿ ಎಂದೂ ಬುದ್ಧಿಯೊಂದಿಗೆ ಕಸರತ್ತು ಮಾಡಿದವರಲ್ಲ. ಅವರ ಕತೆಗಳು ಯಾರನ್ನೂ ಸಂಕೀರ್ಣದಲ್ಲಿ ಕೆಡವಿಲ್ಲ–ತುಂಡು ತುಂಡಾದ ಅನುಭವ ತರುವುದಿಲ್ಲ, ಕಲೆಗಾರಿಕೆಯ ಕುಸುರು ಗೆಲಸವನ್ನ ಅಚ್ಚುಕಟ್ಟಾಗಿ ನಿರ್ವಹಿಸಿರುವಂತೆ ಕಾಣುವ ಕತೆಗಳೂ ಅದೇ ಮುಖ್ಯ ಉದ್ದೇಶವಾಗಿ ಬರೆದುದಲ್ಲ. ಏಕೆಂದರೆ ಅಲ್ಲಿ ವಸ್ತುವಿಗಿಂತ ಕತೆಗಾರಿಕೆ ಮೆರೆದಿಲ್ಲ–ಎದ್ದು ಕಂಡಿಲ್ಲ–ಅದು ಕೇವಲ ಇರುತ್ತದೆ ಮಾತ್ರ.

ಇವರ 'ಇಂದಿರೆಯೋ ಅಲ್ಲಪ್ಪಾ !' ಕತೆಯು ನಯಗಾರಿಕೆ ಎಲ್ಲಕ್ಕಿಂತ ಭಿನ್ನ ವೆನಿಸುವುದು ಈ ದೃಷ್ಟಿಯಿಂದ ನೋಡಿದಾಗ.

ಸಣ್ಣ ಕತೆಗಳಿಗೆ ವಸ್ತುವಾಗುವ ಐತಿಹಾಸಿಕ ಹಾಗೂ ಪೌರಾಣಿಕ ಘಟನೆಗಳು ಸರಿಯಷ್ಟೆ, ಆದರೆ ಶ್ರೀಮಂತ ವಾತಾವರಣದಲ್ಲಿ ಸೌಂದರ್ಯವಾಗುವ ವೈಶಿಷ್ಟ್ಯ ಅತ್ಯಂತ ಕುತೂಹಲಕಾರಿ. ಭಾರತೀಯ ಸಂಸ್ಕೃತಿಯ ಬಗೆಗಿನ ಅರಿವು, ಕಾಳಜಿ ಇಂಥ ಕತೆಗಳ ಅಂತರಂಗದಲ್ಲಿ ಮೆಲ್ಲಗೆ ತೋರಿಬರುತ್ತವೆ.

ಕತೆಯು ಮಾತಾಡುತ್ತಿರುವಾಗಲೇ ಇವರ ಪದ್ಯ ಕತೆಗಳ ನಯಗಾರಿಕೆಯತ್ತ ಗಮನ ಹರಿಯುತ್ತದೆ. ಪುರಾಣ, ಇತಿಹಾಸ, ಬಡವರ ಬದುಕು ಎಲ್ಲವೂ ಈ ಪದ್ಯ ಕತೆಗಳಿಗೆ ವಸ್ತುವಾಗಬಹುದು. ಮುಖ್ಯವಾಗಿ ಕತೆಯ ಜೊತೆಯಲ್ಲೇ ಎದ್ದು ಕಾಣುವ ಜೀವಂತಿಕೆ ಅತ್ಯಂತ ಆಕರ್ಷಕ.

ಕವಿತೆಗಳಲ್ಲೂ ಇವರ ಸರಸ-ವಿನೋದ ಹರಿವ ರೀತಿ ಮೋಜಿನದು. ಆದರೆ ಮಾಸ್ತಿಯವರ ಕತೆಗೆ ಇದ್ದ ಹಾಗೆ ಅವರು ನಡೆದಾಡಿದ ಇತರ ಪ್ರಕಾರಗಳ ಬಗ್ಗೆ ನಮ್ಮ ಗಮನ ಹರಿದಿಲ್ಲ.

'ಚೆನ್ನಬಸವನಾಯಕ' ಚಿಕವೀರರಾಜೇಂದ್ರ' ದಂಥಾ ಐತಿಹಾಸಿಕ ಕಾದಂಬರಿ ಗಳಲ್ಲಿಯ ಮಾತಿಗೆ ಮೀರಿದ ಅನುಭವ ಕೊಡುವ ಕೆಲವು ಸಂದರ್ಭಗಳನ್ನು ಮರೆಯುವುದು ಸಾಧ್ಯವೇ ಇಲ್ಲ.

"ನನ್ನ ಕೃತಿಯ ಬಗ್ಗೆ ಓದುಗನೇ ನಿರ್ಧರಿಸಲಿ, ಆತನೇ ಚರ್ಚಿಸಲಿ. ನಾನು ನನ್ನ ದೃಷ್ಟಿಕೋನ ಇಂಥದು ಎಂದು ಎಂದೂ ಸಮರ್ಥಿಸಿಕೊಂಡು ತರ್ಕ ಮಾಡುತ್ತಾ ಕೂಡುವನಲ್ಲ" ಎಂಬ ಖಂಡಿತವಾದಿ ಮಾಸ್ತಿಯವರು.

'ಚೆನ್ನಬಸವನಾಯಕ' ಕಾದಂಬರಿ ಕೇಂದ್ರ ಸಾಹಿತ್ಯ ಅಕಾಡಮಿಯ ಮೂಲಕ ಎಲ್ಲ ಭಾಷೆಗೆ ಅನುವಾದವಾಗಬೇಕಾದ ಘಟ್ಟದಲ್ಲಿ ಸಣ್ಣದೊಂದು ಆಕ್ಷೇಪ ಅಡ್ಡಿ ಯಾಗಿ ನಿಂತು ಹೋದ ವಿಚಾರ ಪ್ರಸ್ತಾಪಿಸಿದಾಗ "ಆಧಾರಪೂರ್ಣವಾಗಿ ನಾನು ಬರೆದೆ. ಹಾಗೆಂದು ನಾನು ತರ್ಕಿಸುತ್ತಾ ವೇಳೆ ಕಳೆಯಲಾರೆ. ಕೃತಿ ಅನುವಾದಿತ ವಾಗದಿದ್ದರೇನಂತೆ-ಸಮರ್ಥಿಸಿ ವಿರುದ್ಧವಾದ ಹೂಡದಿದ್ದರೇನಂತೆ-ಆ ಕೃತಿ ಉಳಿದೇ ಇದೆ ತಾನೆ. ಉಳಿಯುತ್ತದೆ ಸಹ" ಎಂದರು.

ಯಾವುದೇ ಟೀಕೆಗೂ ಹಾ ಹೂ ಎಂದು ಕೈಬಾಯಿ ತಿರುಗಿಸಿ ಕಾದಾಡುವ ಸ್ವಭಾವವೇ ಇಲ್ಲದ ಮಾಸ್ತಿ ಅವರು ನಿಧಾನವಾಗಿ ಕನ್ವಿನ್ಸ್ ಮಾಡಲು ಯತ್ನಿಸು ತ್ತಿದ್ದರೆ. ಒಪ್ಪದವರ ಬಗ್ಗೆ ಮುನಿಸೇನಿಲ್ಲ. ಆದರೂ ಯಾವುದೋ ವಿಚಾರ ಸಂಕಿರಣವೊಂದರಲ್ಲಿ ಮಾತನಾಡುತ್ತಾ ಯಾರೋ ವಾಚಕರ ವಾಣಿಯಲ್ಲಿ ಬರೆದ ಪತ್ರವೊಂದನ್ನ ಪ್ರಸ್ತಾಪಿಸಿ, ಅದನ್ನೋದಿ-ಕೊಟ್ಟಿದ್ದ ವಿಷಯ ಬಿಟ್ಟು ವೇದಿಕೆಯನ್ನ ಬೇರೆಯಾಗೇ ಬಳಸಿದಾಗ 'ಮಾಸ್ತಿ - ಬಹಳ ಬದಲಾಗಿದ್ದಾರೆ' ಎಂದುಕೊಂಡೆ. ಆ ಬಗ್ಗೆ ಪತ್ರಿಕೆಯಲ್ಲಿ ಟೀಕಿಸಿಯೂ ಇದ್ದೆ.

ಚಲನಚಿತ್ರವೊಂದಕ್ಕೆ ಮಾಸ್ತಿಯವರೊಟ್ಟಿಗೆ ಹೋಗುವ ಸಂದರ್ಭವೊಂದರಲ್ಲಿ ಭೆಟ್ಟಿಯಾದಾಗ ಮಾಸ್ತಿ ಆ ಬಗ್ಗೆ ಮಾತಾಡಿಯೂ ಬಿಟ್ಟರು. ನನ್ನ ಸ್ಪಷ್ಟ ಅನಿಸಿಕೆ ಹೇಳಿದಾಗ ನಗುತ್ತಾ "ಇರಬಹುದು ತಾಯಿ, 'ಜೀವನ' ಪತ್ರಿಕೆಯಲ್ಲಿಯ ನನ್ನ ಅಭಿಪ್ರಾಯ ಕುರಿತು (ಅದು ಹಿಂದಿ ರಾಷ್ಟ್ರಭಾಷೆಯಾಗಬೇಕೆಂಬ ಕುರಿತು ಚರ್ಚೆಯಾಗಿತ್ತು.) ಕಾಂಟ್ರಡಿಕ್ಷನ್ ಅಂದಾಗ ನನ್ನ ನಿಲವು ಹೇಳುವ ಪ್ರಯತ್ನ ಮಾಡಿದ್ದೆ" ಎಂದು ಹೇಳಿಬಿಟ್ಟರು. ಆ ಸಂದರ್ಭದ ನನ್ನ ಲೇಖನ - ಟೀಕೆ ಕುರಿತು ಮೆಚ್ಚಿದರು.

(ನನ್ನ ಬಗ್ಗೆ ದೂರು ಹೇಳುತ್ತ – ಸಿಕ್ಕರೆ ಜಗಳ ಮಾಡ ಬಯಸಿ – ಅವರಿವರಲ್ಲಿ ನನ್ನ ಬಗ್ಗೆ ವಿಚಾರಿಸುತ್ತ ಗೊಂದಲ ಮಾಡಿಕೊಂಡ ಕೆಲವು ಹಿರಿಯ ಸಾಹಿತಗಳ ನೆನಪಾಗಿದ್ದು ಅದೇ ಸಂದರ್ಭದಲ್ಲಿ.)

ಪ್ರಾಮಾಣಿಕ ಅನಿಸಿಕೆ – ಅನುಭವ ಇತ್ಯಾದಿ ಸ್ಪಷ್ಟ ಹೇಳಿಕೆ ಹೊತ್ತು ಬರುವ ಸಾಹಿತ್ಯದ ಬಗ್ಗೆ ಪ್ರಶ್ನಿಸಿದಾಗ–

"ನಾನು ಕಂಡದ್ದೆಲ್ಲ ಬರೆಯಲಾರೆ, ಜಗತ್ತಿನಲ್ಲಿ ಅತ್ಯಂತ ಕೆಟ್ಟ ಗಂಡಸರು– ಅಷ್ಟೇ ಕೆಟ್ಟ ಹೆಂಗಸರು ನಾನು ಕಂಡಿದ್ದೇನೆ. ನನಗೆ ಬೇಕು ಎನಿಸಿದ್ದನ್ನು ಮಾತ್ರ ನಾನು ಬರೆದಿದ್ದೇನೆ. ನನ್ನ ಪಾತ್ರಗಳು ಜೀವಂತ 'It is a picture of life' ಎನ್ನುತ್ತಾ ಈ ದೃಷ್ಟಿಯಲ್ಲಿ ಹೇಳಬೇಕೆಂದರೆ ನನ್ನದು ಭವಭೂತಿಯ ದೃಷ್ಟಿಕೋನದಂತೆ. ಬರೆಯುತ್ತ ಹೋಗುವುದು, ಯಾರಿಗೋ ಬೇಕಾಗಲಿಲ್ಲವೆಂದು ಹಿಂಜರಿಯುವುದೇಕೆ? ಭವಭೂತಿಯ ವಾಕ್ಯ ಅಹಂಕಾರದಿಂದ ಉದಯಿಸಿದ್ದಲ್ಲ, ವಿನಯದಿಂದ ಬಂದದ್ದು ಅಥವಾ ನಾನು ಹಾಗೆ ಅದನ್ನು ಬಳಸಿಕೊಳ್ಳುತ್ತೇನೆ. ವಿಶ್ವ ವಿಶಾಲವಾಗಿದೆ, ಸಮಯ ಸಾಕಷ್ಟಿದೆ. ನನ್ನ ಸಮಸ್ಯೆಯನ್ನು ವಿಶ್ವವೇ ಸಮಯದೊಂದಿಗೆ ಸಹ ಚಿಂತಿಸಿ ನಿರ್ಧರಿಸೀತು. ಕಾಲಾಹರಣ ಮಾಡುವ ಬದಲು ಕಾರ್ಯ ತತ್ಪರನಾಗುವುದು ಲೇಸು" ಮಾತು ಕೃತಕವಾಗಿರಲಿಲ್ಲ. ಯಾವುದೋ ಸಂತೃಪ್ತಿ ಕೊಟ್ಟಿತ್ತು, ವಾತಾವರಣದಲ್ಲಿ ಹರಡಿದ ಮೌನ ಅವನ್ನು ಪುಷ್ಟೀಕರಿಸಿತ್ತು.

'ಪಾಶ್ಚಿಮಾತ್ಯ ಪ್ರಭಾವದಿಂದಾಗಿ ಇತ್ತೀಚೆಗೆ ಸಾಹಿತ್ಯದಲ್ಲಿ ಬಳಸುವ ಪದಗಳು, ಸಂದರ್ಭಗಳು ವಿಕೃತಿ – ಅಸಭ್ಯತೆ ಅತಿಯಾಗುತ್ತಿದೆಯಲ್ಲವೇ?" ಎಂದವರು ಹಿರಿಯರಾದ ತಾಂಡವೇಶ್ವರ.

'They are naked on the pages, not in their houses or before their mother and sister' ಎನ್ನುವಾಗ ಅಪರೂಪಕ್ಕೆ ಮಾಸ್ತಿ ಅವರ ಉದ್ರಿಕ್ತ ಮುಖ ನೋಡಿದೆ.

ಇಂಥ ಸಾಹಿತ್ಯ ಸೃಷ್ಟಿ, ಓದುಗರ ಮನಸ್ಸನ್ನು ಕೆರಳಿಸುವ ಪ್ರಯತ್ನ ನಡೆಸುವ ಈ ಜನ ತಪ್ಪಲ್ಲಿ ತಾವು ಇಂಥ ವಿಭಿನ್ನ ವ್ಯಕ್ತಿಗಳಾಗಿಲ್ಲ. ಅಕ್ಕ–ತಂಗಿಯರಲ್ಲಿ

ಹೆತ್ತವರಲ್ಲಿ, ಅವರು ಸಜ್ಜನರಾಗಿಯೇ ಇದ್ದಾರೆ, ಎಂಬುದೂ ಅವರದೇ ಅಭಿಪ್ರಾಯವಾಗಿತ್ತು.

"ಪ್ರಭಾವ ಬೇಕು, ಪ್ರಭಾವಿತವಾದಷ್ಟನ್ನು ನಮ್ಮದಾಗಿಸಿ ತೋರಬೇಕು. ಸಂಸ್ಕೃತಿಯಲ್ಲಿರುವ ವಿಭಿನ್ನತೆಯ ಅರಿವಿರಬೇಕು. ಅಲ್ಲಿ ನಡೆದದ್ದು ಇಲ್ಲಿ ಅಡ್ಡಿಯಿಲ್ಲವೆಂಬ ಧೋರಣೆ ತನ್ನತನವನ್ನು ಕಳೆದುಕೊಂಡ ದೌರ್ಬಲ್ಯದ ಚಿಹ್ನೆ' ಎನ್ನುತ, "ಈ ಮಕ್ಕಳಲ್ಲಿ ನಯವಿದೆ, ಸಜ್ಜನಿಕೆ ಇದೆ. ಜಾಣ ಮಕ್ಕಳು. ತುಸು ಎಡವಿದ್ದಾರೆ, ಕಣ್ಣು ತೆರೆದರೆ ಆದೀತು. ಆ ಕಾಲ ಬರುತ್ತದೆ. ಕನ್ನಡ ಸಾಹಿತ್ಯಕ್ಕೆ ಭವಿಷ್ಯವಿದೆ. ಅದು ನಿಲ್ಲುತ್ತದೆ. ನಿಲ್ಲಲೇಬೇಕು. ಮಗು ಬೆಳೆಯಬೇಕು ನಡೆ ಕಲಿಯಬೇಕು. ನಡೆವಾಗ ಎಡವಿತೆಂದು ಸುಮ್ಮನಿರದೆ ಕೈಹಿಡಿದು ನಡೆಸಬೇಕಲ್ಲವೇ ?" ಎನ್ನುವ ಇವರ ಮಾತಿನಲ್ಲಿ ಕೇವಲ ಹಿರಿತನದ ಧೋರಣೆ ಇರದೆ ಸುಂದರವಾದ–ಹಿತವೆನಿಸುವ ಆದರದ ಕಲ್ಪನೆ ಮಾತ್ರ ಕಂಡಿತ್ತು. ಅಭಿಪ್ರಾಯಗಳು ಹಿಡಿಸುವ-ಬಿಡುವ ವಿಚಾರ ಬೇರೆ–ತಲೆಮಾರುಗಳ ಅಂತರ–ಸಾಮಾಜಿಕ ಬದಲಾವಣೆ. ಬದುಕಿನ ಸಮಸ್ಯೆಗಳೇ ವಿಚಿತ್ರರೂಪದಲ್ಲಿ ನಿಂತಿರುವಾಗ ಬಹುಶಃ ಮಾಸ್ತಿಯವರು ಮಾತು ಇಂದಿನ ಪೀಳಿಗೆಗೆ ಸರಿಹೋಗದೇ ಇರಬಹುದಾದರೂ ಹಿರಿತನಕ್ಕೆಂದೂ ಗೌರವ ಸಲ್ಲುತ್ತದೆ.

ಎಳೆಯರ, ಗೆಳೆಯರ ಯಾವುದೇ ಪದ್ಯ, ನಾಟಕ ಮೊದಲಬಾರಿಗೆ ವಾಚನ ಅಣ್ಣ ಮಾಸ್ತಿಯವರ ಮನೆಯಲ್ಲೇ ಆಗುತ್ತಿದ್ದ ದಿನಗಳನ್ನು ಇನ್ನೂ ನೆನೆಯುವ ಸಾಹಿತಿಮಿತ್ರರಿದ್ದಾರೆ. 'ಜೀವನ' ಪತ್ರಿಕೆಯಲ್ಲಿ ಅದೆಷ್ಟು ಸೋದರ, ಸೋದರಿಯರ ಸಾಹಿತ್ಯಕ್ಕೆ ಅವಕಾಶ! ಕನ್ನಡದ ಬರವಣಿಗೆಯೇ ಅಪರೂಪವಾಗಿದ್ದ ಆ ದಿನಗಳಲ್ಲಿ ಅಕ್ಷರಕ್ಷರಕ್ಕೂ ಮಹತ್ವವಿತ್ತು–ಪ್ರೋತ್ಸಾಹದ ನುಡಿ-ಪ್ರಕಟಣೆ ಕನ್ನಡದ ಬೆಳವಣಿಗೆಗೆ ದಾರಿಯಾಗಿತ್ತು. ಆ ದಿನಗಳ ವಿಮರ್ಶೆಯ ರೀತಿಯೇ ಬೇರೆಯಿತ್ತು. ಇಂದು ವಿಚಿತ್ರವಾಗಿ ಕಾಣುವ ಅಂದಿನ ವಿಮರ್ಶೆ–ವಿಚಾರಗಳು ಆ ದಿನಗಳಲ್ಲಿ ಬಹುಶಃ ಅನಿವಾರ್ಯವಾಗಿದ್ದುವೇನೊ! ಅಂತೆಯೇ ದೂರದೂರಿನಿಂದ ಬಂದ ಪ್ರತಿಭಾವಂತರು, ಹಿರಿಯರು ಮಾಸ್ತಿಯವರ ಮನೆಯ ಅತಿಥಿಗಳಾಗುವುದು, ಸತ್ಕಾರ ಕೂಟಗಳಲ್ಲಿ ಭಾಗವಹಿಸುವುದು ಸ್ಥಳೀಯರಾದ ಎಲ್ಲ ಸಾಹಿತಿ ಮಿತ್ರರೂ ಸೇರಿ ಚರ್ಚಿಸುವುದು ಇತ್ಯಾದಿ ಅಂದು ಬಹಳ ಸಡಗರದ ಅಗತ್ಯ ಕೆಲಸ. ಇವೆಲ್ಲಕ್ಕೂ ಕೇಂದ್ರಬಿಂದು–ಸೂತ್ರಧಾರನಂತೆ ನಿಂತವರು ಅಣ್ಣ ಮಾಸ್ತಿ–ಅನೇಕರ ಸಾಹಿತ್ಯ ಹಲವು ಸಂದರ್ಭದಲ್ಲಿ ಅನುಕರಣೆ-ಪ್ರಭಾವಗಳಿಂದ ದೂರವಾಗದೇ ಹೋಯಿತು ಸಹ. ಆ ಸಂದರ್ಭದಲ್ಲಿ ಈಗಲೂ ಮಾಸ್ತಿ ಅವರಿಗೆ ತಮ್ಮದೇ ಆದ ಕೆಲವು ನಿರ್ಧಾರಿತ ಅಭಿಪ್ರಾಯಗಳಿವೆ.

ಯಾವುದೇ ಅಥವಾ ಯಾರದೇ ಪ್ರಭಾವದಿಂದ ದೂರ ಸಿಡಿದು ತಾವೇ ಸ್ವಂತವಾಗಿ, ಪ್ರತ್ಯೇಕವಾಗಿ ನಿಲ್ಲುವ ಗುರಿ ಹೊತ್ತು, ಹೊಸತನವನ್ನು ಸಾಹಿತ್ಯದಲ್ಲಿ ರೂಢಿಸಿಕೊಂಡ ನವ್ಯ ಪರಂಪರೆಯ ಕುರಿತು ಮಾತು ಸಾಗಿದಾಗ "ಇದು ಸರ್ವಥಾ ಸರಿಯಲ್ಲ. ಸಾಹಿತ್ಯ ಪರಂಪರಾಗತವಾಗಿಯೇ ಬರಬೇಕೇ ಹೊರತು ಎರವಲು ಪಡೆದು ಬರುವಂಥದಲ್ಲ. ಹೀಗಾದಾಗ ಅದು ಉಳಿಯಲೂ ಆರದು" ಎನ್ನುತ್ತ ಸಂಸ್ಕೃತಿಯ ಬೇರುಗಳ ಭದ್ರತೆಯ ಬಗ್ಗೆ ಇರುವ ಅಚಲವಿಶ್ವಾಸ-ಆ ವಿಶ್ವಾಸ ಎಂದೂ ಕದಲದು–ಹಾಗೂ ಅಂಥವನ್ನ ಅಲುಗಾಡಿಸುವ ಸಾಹಸ ವ್ಯಥಾ ಪ್ರಯಾಸ ಎನ್ನುವ ಅಭಿಪ್ರಾಯ ವ್ಯಕ್ತ ಪಡಿಸಿದರು.

ಬಹುಪಾಲು ಸಣ್ಣಕತೆಯನ್ನೇ ಆಯ್ದು ನಾಟಕ-ರೇಡಿಯೋ ನಾಟಕ ಬರೆಯುವ ಬಗ್ಗೆ ಮಾತಾಡಿದಾಗ–

'ಕತೆಯಿಲ್ಲದೆ ನಾಟಕ–ಏಕೆ–ಯಾವ ಸಾಹಿತ್ಯವೂ ಇಲ್ಲ. ಎಲ್ಲಕ್ಕೂ ಕಥೆ ಬೇಕು. ಜೀವನ ಬೇಕು. Literature should come from life ಎನ್ನುತ್ತಾ ಹಿರಿಯ ಗೆಳೆಯ ನವರತ್ನರಾಮರಾಯರನ್ನು ನೆನೆದರು.

ಒಮ್ಮೆ ನವರತ್ನ ರಾಮರಾಯರು ಅವರ ಬದುಕಿನಲ್ಲಿ ಕಂಡ ವಿಚಿತ್ರ ಆದರ್ಶದ ವ್ಯಕ್ತಿಯೊಬ್ಬನ ಕಥೆಯನ್ನು ಹೇಳಿದ್ದರು. ಅವರು ವ್ಯಕ್ತಿಯನ್ನು ಎಷ್ಟು ಹಚ್ಚಿ ಕೊಂಡಿದ್ದರೆಂದರೆ ಆ ಗೀಳನ್ನು ಮಾಸ್ತಿಯವರಿಗೂ ಅಂಟಿಸಿ–ಆ ಅನುಭವವನ್ನ ಕಥೆಯ ರೂಪದಲ್ಲಿ ಬರೆಯಲು ಒತ್ತಾಯ ಹಾಕಿದರು. ಮನಸ್ಸನ್ನು ತುಂಬಿದ್ದ ಆ ಕಥೆಯನ್ನ ಬರೆದಾಗ ಅದೊಂದು ಪುಟ್ಟ ಕಾದಂಬರಿ ಅಥವಾ ನೀಳ್ಗತೆಯಾಗಿ ಬೆಳೆದಿತ್ತು. ಕೃತಿ ಓದಿ, ತಾವು ಕಂಡ ವ್ಯಕ್ತಿಯನ್ನ ಕಲ್ಪನೆಯಲ್ಲಿ ಸುಂದರವಾಗಿ ಚಿತ್ರಿಸಿ, ಅಪರೂಪವೆನಿಸಿ ಮನಸ್ಸಿಗೆ ತುಂಬಿಕೊಟ್ಟ ಗೆಳೆಯ ಮಾಸ್ತಿಯವರನ್ನು ರಾಮರಾಯರು ಮೆಚ್ಚುಗೆಯಿಂದ ತಬ್ಬಿಕೊಂಡುಬಿಟ್ಟರಂತೆ. ಆ ದಿನಗಳನ್ನ ನೆನೆವರೆ ಮಾಸ್ತಿ ಇಂದೂ ಭಾವುಕರಾಗಿ ಬಿಡುತ್ತಾರೆ. ನೆನಪಿನ ಶಕ್ತಿಯೇ ಅಂಥದ್ದು. ಅಂದು ಮೂಡಿ ಬಂದ 'ಸುಬ್ಬಣ್ಣ' ಇಂದಿಗೂ ಅನೇಕರ ಮನಸ್ಸನ್ನ ಗೆದ್ದ ಕೃತಿ. ಅನೇಕ ನಿರ್ಮಾಪಕರಿಗೆ ಅದನ್ನ ಚಲಚಿತ್ರವಾಗಿಸುವ ಆಸೆ. 'ಸುಬ್ಬಣ್ಣ' ಪ್ರಭಾವ ದಿಂದ ಅನೇಕರು ಬರೆದ ಕಾದಂಬರಿಗಳೂ ಉಂಟಾದರೂ ಅವಾವುವೂ 'ಸುಬ್ಬಣ್ಣ'ನ ಸಮಿಪಕ್ಕೆ ನಿಲ್ಲಲಾರದೇ ಹೋದವು ಸಹ.

'ಕಾಕನಕೋಟೆ' ಯಂಥ ಸ್ವಾಮಿಭಕ್ತಿ ಕುರಿತ ನಾಟಕ ಅನೇಕರ ಟೀಕೆಗೆ ಗುರಿಯಾಗಿದ್ದರೂ ಅದರಲ್ಲಿನ ನಾಟಕೀಯ ಗುಣಗಳನ್ನು ಸತ್ವಪೂರ್ಣಭಾಷೆಯನ್ನ ಹಾಡುಗಳನ್ನ ಸಾಧಾರಣದ ಪಟ್ಟಿಗೆ ಹೇಗೆ ಸೇರಿಸ ಬಹುದು ?

ಸೊಗಸಾಗಿ ಅಭಿನಯಿಸಲ್ಪಟ್ಟ ಆ ನಾಟಕದ ಬಗ್ಗೆ ಮಾತನಾಡುತ್ತ ಉತ್ಸಾಹ ದಿಂದ ಭಾಗವಹಿಸಿ ದುಡಿದ ಎಳೆಯರ ತಂಡವನ್ನು ಹರಸಿದರು. ಆ ನಾಟಕದ ಪಾತ್ರಗಳ ಸೃಷ್ಟಿಗೆ ಸ್ಫೂರ್ತಿ ನಮ್ಮದೇ ಜನ–ನಮ್ಮದೇ ನೆಲ ಹೇಗೆ ಎಂಬುದನ್ನು ಬಣ್ಣಿಸಿದರು. "ಯಾವುದೇ ನಾಟಕ ಒಮ್ಮೆ ರಂಗದ ಮೇಲೆ ಬಂದರೆ ಸಾಲದು,

ಮತ್ತೆ-ಮತ್ತೆ ರಂಗಪ್ರಯೋಗಗಳಾಗುವಂತಾಗಬೇಕು. ಅದು ಹೆಚ್ಚು ಕಾಲ ಜೀವಂತವಾಗಿ ಉಳಿಯಲು, ಆ ಬಗ್ಗೆ ಪ್ರೇಕ್ಷಕ ಚಿಂತಿಸಲು ನೆರವಾಗುತ್ತದೆ" ಎಂದರು

ಮಾಸ್ತಿಯವರ ಸ್ವಭಾವ ಎಂದೂ ಛಿದ್ರಸಂಶೋಧನೆಯದಲ್ಲ. ಮೇಲು ನೋಟದ ಮೋಜಿಗೇ ಬೆರಗಾಗಿ ಬಿಡುವ ಸರಳರವರು.

ಇವರದೇ ಅನುವಾದ 'ದ್ವಾದಶರಾತ್ರಿ' (ಶೇಕ್ಸ್‌ಪಿಯರನ ಟ್ವೆಲ್ಫ್ತ್ ನೈಟ್) ನಾಟಕವನ್ನು ರಂಗದ ಮೇಲೆ ತಂದಾಗ ಮಾಸ್ತಿಯವರೂ ಬಂದಿದ್ದರು. ನಾಟಕ ದುದ್ದಕ್ಕೂ ತಪ್ಪುಗಳನ್ನು ಕಂಡಾಗ ಹೇಗಾಗಿತ್ತೊ ? ಎಂಬ ಇರಿಸುಮುರಿಸಿನಿಂದ ತವಕಿಸುತ್ತಿದ್ದ ನನ್ನಲ್ಲಿ ವಿಸ್ಮಯ ಮೂಡಿಸಿದ್ದು ಮಾಸ್ತಿಯವರ ಪ್ರತಿಕ್ರಿಯೆ. ನಾಟಕದ ಪ್ರತಿ ಅಂಶವನ್ನೂ ಅತ್ಯಂತ ಆತ್ಮೀಯವಾಗಿ ಅನುಭವಿಸುತ್ತ, ಖುಷಿ ಪಡುತ್ತ ಮುಖಭಾವದಲ್ಲೇ ಎಲ್ಲವನ್ನೂ ಹೇಳಿ ಬಿಡುವಂತಿದ್ದ ಅವರ ರೀತಿಯಿಂದ ನನಗೆ ತಬ್ಬಿಬ್ಬಾಗಿತ್ತು. ವಿಮರ್ಶಾತ್ಮಕನೋಟದ ಬಗ್ಗೆ ಗುಮಾನಿಗಳು ಎದ್ದಿದ್ದವು. ಆದರೆ ಒಂದೇ ಸಮಾಧಾನ ಅಲ್ಲಿದ್ದವರು ಮಾಸ್ತಿ. ಬಹುಶಃ ಆ ಸ್ಥಳದಲ್ಲಿ ಬೇರೆ ಯಾರೇ ಲೇಖಕ ಆ ಕೃತಿಯ ಕರ್ತೃವಾಗಿದ್ದಿದ್ದರೆ ನಾಟಕ ಪ್ರದರ್ಶನದ ಸ್ವರೂಪ ಹಿಡಿಸದೆ ಬೇಸರ ಪಡುವುದು ಕೇವಲ ಸಹಜವಾಗಿತ್ತು. ಆದರೆ ಮಾಸ್ತಿ ಬಹುಶಃ ಅಲ್ಲಿಯೂ ಕಂಡುಕೊಂಡದ್ದು ಕೇವಲ ಉತ್ಸಾಹವನ್ನು, ಆಸಕ್ತಿಯನ್ನು ಮಾತ್ರ, ಎಂದುಕೊಂಡೆ. ನೆನಪು ಹಿಂದೆ ಸರಿದಾಗ ಅವರು ಅಂದು ವಿಮರ್ಶೆ ಬಗ್ಗೆ ಹೇಳಿದ ಮಾತುಗಳೂ ನೆನಪಾದವು. ಇತ್ತೀಚಿಗಿನ ವಿಮರ್ಶೆಯ ಬಗ್ಗೆ ಹೇಳುತ್ತ 'ಅದು ಸಾಮಾನ್ಯನಿಗೆ ಅಲ್ಲ. ಸಾಮಾನ್ಯನ ಅರಿವಿಗೆ ಬಾರದ ವಿಮರ್ಶೆಯಿಂದ ಉಪಯೋಗವೂ ಇಲ್ಲ' ಎಂದು ನಕ್ಕು ಬಿಟ್ಟಿದ್ದರು.

ಮಾಸ್ತಿಯವರು ವಿಮರ್ಶೆಯನ್ನು ಕುರಿತು ಹೆಚ್ಚು ಅಭ್ಯಾಸಮಾಡಿದ್ದಾರೆ. ಬರೆದಿದ್ದಾರೆ, ಎಂಬ ವಿಚಾರ ಇಲ್ಲಿ ನೆನಪಿಸಿಕೊಳ್ಳಬೇಕು. ಆದರೂ ವಿಮರ್ಶೆ ಹೇಗಿರಬೇಕು ಎಂಬ ಬಗ್ಗೆ ಅವರ ಮಾತೇ ಕೊನೆಯದು-ಸರ್ವಸಮ್ಮತವೂ ಆಗುವು ದಿಲ್ಲ. ವಿಮರ್ಶೆ ಅವರ ಸಂದರ್ಭದಲ್ಲಿ ಬೆಳೆದು ಬಂದ ವಾತಾವರಣವೇ ಬೇರೆ. ವಿಮರ್ಶೆಯ ಅಗತ್ಯದ ಬಗ್ಗೆ ಅನೇಕ ವಿವಾದಗಳಿದ್ದರೂ ಕ್ರಿಯಾತ್ಮಕ ಬೆಳವಣಿಗೆ ಹಾಗೂ ಚಿಂತನೆಯ ಸಮತೋಲಕ್ಕೆ ಸ್ಪಷ್ಟ ವಿಮರ್ಶೆ ಅತ್ಯಗತ್ಯ. ಆದರೆ ಅದು ಪೂರ್ವಾಗ್ರಹ ಪೀಡಿತ ಅಥವಾ ಗುಂಪುಗಾರಿಕೆಯ ಪ್ರಭಾವದ್ದಾಗಿರಬಾರದು ಮಾತ್ರ.

ಮಾಸ್ತಿ ಅವರನ್ನು ಚಲಚಿತ್ರ ಕುರಿತೂ ಪ್ರಶ್ನಿಸಿದಾಗ, 'ಪ್ರಾಯೋಗಿಕ' ಚಿತ್ರಗಳ ಬಗೆಗೂ ಮಾತು ಹರಿದಿತ್ತು. "ನಾನು ಓದಿಲ್ಲದ ಕೃತಿಗಳ ಬಗ್ಗೆ ಹೇಗೆ ಹೇಳಲಿ ? ಸಂಸ್ಕಾರ ಕತೆ ಹೇಳಬಲ್ಲೆ. ವಂಶವೃಕ್ಷ ಚಿತ್ರವನ್ನು ಸ್ನೇಹಿತರ ಅಪೇಕ್ಷೆಯ ಮೇರೆಗೆ ನೋಡಿದೆ. ನಮ್ಮ ಹುಡುಗಿ ಶಾರದಾ ಚನ್ನಾಗಿ ಪಾತ್ರ ನಿರ್ವಹಿಸಿದ್ದಾಳೆನ್ನಿಸಿತು. ಇನ್ನು ಗೆಜ್ಜೆಪೂಜೆ, ಸಹ ನೋಡಿದೆ. ಚಿತ್ರ ಚೆನ್ನಾಗಿದೆ

ಸ್ವಲ್ಪ ಮೇಲೊಡ್ಡಾಮು ಎನಿಸಿತು. ಆದರೆ ಚಿತ್ರಕ್ಕೆ ಅದೂ ಇರಬೇಕು" ಎಂದರು. ಇತ್ತೀಚಿನ ಬೂತಯ್ಯನ ಮಗ ಅಯ್ಯು, ಉಪಾಸನೆ ಚಿತ್ರಗಳ ಬಗ್ಗೆ ಸಹ ಇಂಥದೇ ಅಭಿಪ್ರಾಯ ಕೊಟ್ಟಿದ್ದಾರೆ.

ಅತ್ಯಂತ ಹೆಚ್ಚಿನ ಸುದ್ದಿ ಮಾಡಿದ ಅಥವಾ ಸಾಮಾಜಿಕವಾದ ಬದಲಾವಣೆಗೆ ತುಸುವಾದರೂ ಕಾರಣವಾದ ಕೃತಿಗಳು ಯಾರೇ ಬರೆದಿರಲಿ. ಆ ಬಗ್ಗೆ ಓದಿಯೂ ಓದಿಇಯೂ–ತಿಳಿದಿಲ್ಲ ಮಾಸ್ತಿಯವರು ಎಂಬ ಮಾತನ್ನು ನನ್ನ ಮನಸ್ಸು ಸಂಪೂರ್ಣ ವಾಗಿ ಒಪ್ಪಿಕೊಳ್ಳಲಿಲ್ಲ. ಕೆಲವು ವಿಚಾರಗಳಿಗೆ ನೇರವಾದ ಅಭಿಪ್ರಾಯ ಹೇಳದೇ ಈ ಹಿರಿಯರು ತಪ್ಪಿಸಿಕೊಳ್ಳುತ್ತಾರೆ ಎಂದು ಮಾತ್ರ ಅನ್ನಿಸಿತು. ಇಂಥ ನನ್ನ ಅನಿಸಿಕೆ ಧೃಡವಾಗಲು ಮತ್ತೊಂದು ಸಂದರ್ಭವೂ ಕಾರಣವಾಯಿತು.

ಸಾಹಿತ್ಯ ಅಕಾದಮಿಯನ್ನ ಮಂತ್ರಿಗಳೊಬ್ಬರು ವಶಕ್ಕೆ ತೆಗೆದುಕೊಂಡು ನಡೆಸಲಿದ್ದಾರೆಂಬ ವಿಚಾರ ಬಂದಾಗ ಅನೇಕ ವಿರೋಧಾಭಿಪ್ರಾಯಗಳಿದ್ದವು. ಆ ಸಂದರ್ಭದಲ್ಲಿ ಪತ್ರಿಕೆಗಾಗಿ ನಾನು ಹಲವು ಸಾಹಿತಿಗಳ–ಆಸಕ್ತರ ಅಭಿಪ್ರಾಯ ಸಂಗ್ರಹಣೆಗೆ ಹೊರಟಿದ್ದೆ. ಮಾಸ್ತಿಯವರನ್ನು ಈ ಕುರಿತು ಪ್ರಶ್ನಿಸಿದಾಗ ಅವರ ಅಭಿಪ್ರಾಯ ಖಚಿತವಾಗಿ ಬರಲಿಲ್ಲ. ವಯಸ್ಸನ್ನು ನೆಪಮಾಡಿ ವಿಚಾರವನ್ನೇ ತೇಲಿಸಿದ್ದರು. ಲೇಖನ ಪ್ರಕಟವಾದ ಮೇಲೆ ಅನೇಕರು ಆ ಸಂದರ್ಭದಲ್ಲಿ ಮಾಸ್ತಿಯವರ ಜಾತೀಯತೆ ಕುರಿತೂ ಮಾತಾಡಿದರು. ಒಟ್ಟಾರೆ ಮಾಸ್ತಿಯವರು ಯಾವುದೇ ಅಭಿಪ್ರಾಯವನ್ನ ಹೇಳುವುದಿಲ್ಲ. ಇದರ ಹಿಂದೆ ಬಹುಶಃ ಯಾರನ್ನೂ ನೋಯಿಸಬಾರದೆಂಬ ಭಾವ ಮಾತ್ರ ಇದೆಯೆಂದು ನನ್ನ ಅನಿಸಿಕೆ.

"ನಿಮ್ಮ ಕೃತಿಗಳಲ್ಲಿ ನೀವು ತುಂಬ ಮೆಚ್ಚುವ ಪಾತ್ರಯಾವುದು ?" ಎಂದಾಗ

"ಎಲ್ಲ ನನ್ನದೇ ಸೃಷ್ಟಿ. ಹೇಗೆ ಹೇಳಲಿ ? ಎಲ್ಲ ಪಾತ್ರಗಳ ಬಗೆಗೂ ನನ್ನಲ್ಲಿ ಅಭಿಮಾನವಿದೆ. ಕೆಲವು ಪಾತ್ರಗಳ ಮೇಲೆ ನನಗೆ ತುಂಬ ಕರುಣೆ ಇದೆ. ಇನ್ನು ಕೆಲವು ಪಾತ್ರಗಳ ಪರಿಸ್ಥಿತಿ ನೆನಸಿಕೊಂಡಾಗ 'ಅಯ್ಯೋ ಪಾಪ !' ಎನಿಸುತ್ತದೆ" !

ನಿಮ್ಮ ಕೃತಿಗಳಲ್ಲಿ ನೀವು ಮೆಚ್ಚುವ ಕೃತಿಯಾವುದು ?"

"ನೋಡಿ ಹದಿಮೂರು ಮಕ್ಕಳ ತಾಯಿ, ತಂದೆಯರನ್ನ ಮಕ್ಕಳಿಲ್ಲದ ಬಂಧು ವೊಬ್ಬರು ಒಂದು ಮಗು ಬೇಕಂತ ಬೇಡಿದರು. ಆಗಲಿ ನಾಳೆ ಬನ್ನಿ ಅಂದರು ಈ ದಂಪತಿಗಳು. ಯಾವ ಮಗುವನ್ನ ಕೊಡುವುದೆಂದು ಇಡೀ ರಾತ್ರಿ ಅತ್ತಿತ್ತ ಅಡ್ಡಾಡಿ ಚಿಂತಿಸಿದರಂತೆ. ಕೊನೆಗೆ ಏನೂ ತೋಚದೆ, ಮರುದಿನ ಬಂದವರನ್ನು ನಮ್ಮ ಯಾವ ಮಗೂನು ಬಿಟ್ಟುಕೊಡೋಕೇ ಸಾಧ್ಯವಾಗುತ್ತಿಲ್ಲ, ಕ್ಷಮಿಸಿ ಎಂದು ಹೇಳಿದರಂತೆ. ಹೀಗೆ ನನ್ನ ಸೃಷ್ಟಿಯಲ್ಲಿ ಬಂದ ಎಲ್ಲ ಪಾತ್ರಗಳ ಕೃತಿಗಳ ಬಗ್ಗೆ ನನಗೆ ಒಂದೇ ವಿಶ್ವಾಸ ಅಭಿಮಾನ ಇದೆ. ಕರುಣೆ ಇದೆ. ಅನುಕಂಪವಿದೆ. ಹೇಗೆ ಅವುಗಳಲ್ಲಿ ತಾರತಮ್ಯ ಗುರುತಿಸಲಿ ? ಈ ಮಾತಿನ ಹಿಂದೆ ನಿಜವಾದ ಅಂತಃಕರಣ ಕಾಣಿಸಿತ್ತು.

ನೂರಾರು ಕೃತಿ ಬರೆದು ಇದು ನನಗೆ ಅತ್ಯಂತ ತೃಪ್ತಿಕೊಟ್ಟಿದೆ ಎಂತಲೋ I was very much moved with that Character' ಅಂತಲೋ ಬಿಗುವಾನ ದಿಂದ ಹೇಳುವ ಅನೇಕ ಸಾಹಿತಿಗಳಿಂದ ಇವರೆಷ್ಟು ಭಿನ್ನಎನಿಸಿತ್ತು.

"ಇನ್ನೂ ಹತ್ತು ವರ್ಷದ ನಂತರ ಈ ಪ್ರಕಾರ ಏನಾದೀತು ?" ಎಂದಾಗ ಭವಿಷ್ಯದ ಬಗ್ಗೆ ಹೀಗೇ ಎಂದು ಗೆರೆ ಹಾಕಿ ಹೇಳುವಷ್ಟರ ಕಲ್ಪನೆ ಇಲ್ಲವಾದರೂ ಉಜ್ವಲ ಭವಿಷ್ಯವಂತೂ ಕನ್ನಡಕ್ಕೆ ಇದೆ ಎಂಬುದು ಅವರ ನಂಬುಗೆ. ತಕ್ಷಣದ ಪರಿಸ್ಥಿತಿ ಗ್ರಹಿಸಿದರೆ ಕೇವಲ ಕನ್ನಡಾಭಿಮಾನದ ಕಾಲ್ಪನಿಕ ಸಮಾಧಾನ ಮಾಸ್ತಿ ಯವರದು ಎನಿಸಿತ್ತು, ಸಾಹಿತ್ಯವನ್ನು ಹೆಚ್ಚು ಸೌಂದರ್ಯದ ದೃಷ್ಟಿಯಲ್ಲೇ ಬಳಸುವ ಮಾಸ್ತಿಯವರಿಂದ ಹೆಚ್ಚನ್ನು ನಿರೀಕ್ಷಿಸಿದರೆ ನಮ್ಮದೇ ತಪ್ಪಾಗುತ್ತದೆ.

ಬದುಕಿನಲ್ಲಿ ನೆನಪುಗಳಿಗೆ ಮಹತ್ವದ ಸ್ಥಾನವಿದೆ, ನೆನಪುಗಳನ್ನು ಕೆದಕಿದಾಗ ಮಾಸ್ತಿಯವರಿಗೆ ಇನ್ನು ಸಹಸ್ರ ಕಡೆಗೆ ವಸ್ತು ಸಿಗಬಲ್ಲದು. ಹೀಗೆಂದಾಗ ತಮ್ಮ ನೆನಪು ಮಾತ್ರವಲ್ಲ,ಇತರರ ನೆನಪೂ ಅಷ್ಟೇ ಖುಷಿ ತರುವಂಥದೆಂಬ ಕಾರಣಕ್ಕಾಗಿ ಬರೆದದ್ದೂ ಉಂಟು (ನವರತ್ನ ರಾಮರಾಯರ ಕೆಲವು ನೆನಪುಗಳು) ಬೇಂದ್ರೆಯವರ ಮೊದಲ ಕವನ ಸಂಕಲ ಪ್ರಕಟಿಸಿದ ಕೀರ್ತಿ ಮಾಸ್ತಿಯವರದೇ. 'ಜೀವನ' ಪತ್ರಿಕೆಯಲ್ಲಿ ಬೆಳಕು ಕಂಡ ಕೃತಿಗಳಿಗೆ ಲೆಕ್ಕವಿಲ್ಲ. ಒಳ್ಳೆಯ ಕೃತಿ ಬಂದಾಗ ಪಕ್ಷಪಾತ ವಿಲ್ಲದೆ ಹಿಗ್ಗಿ ಹರಿಸುವ ಹಿರಿಯಗುಣ ಇವರಿಂದ ಕಲಿಯಬೇಕು.

ಬಹುಹಿಂದೆಯೇ ಆಗಬೇಕಿದ್ದ ಮಾಸ್ತಿಯವರ ಸನ್ಮಾನದ ಕಾರ್ಯ ಅಂತೂ ಕಾರ್ಯಗತವಾಯಿತು. ಮಾವಿನಕೆರೆ ರಂಗನಾಥ್‌ರಂಥ ಉತ್ಸಾಹೀ ಯುವಕರಿಂದ ವೃದ್ಧಪಿತಾಮಹ ಡಿ.ವಿ.ಜಿ. ಅವರ ಅಧ್ಯಕ್ಷತೆಯಲ್ಲಿ, ಜಿ.ಪಿ. ರಾಜರತ್ನಂ, ವಿ. ಸೀತಾರಾಮಯ್ಯ. ವಿ. ಕೃ. ಗೋಕಾಕ್, ರಂ. ಶ್ರೀ. ಮುಗಳಿ, ಹಾ.ಮಾ. ನಾಯಕ್, ಡಾ॥ ಜಿ. ಎಸ್. ಎಸ್. ಮುಂತಾದವರು ಮಾಸ್ತಿಯವರ ಬಗ್ಗೆ ನುಡಿದ (1972ರಲ್ಲಿ) ಅಂದಿನ ಅಪ್ಪೂರಿಯ ಸಮಾರಂಭ ಕನ್ನಡಿಗರ ಅಭಿಮಾನದ ಸಂಕೇತ. ಇದೇ ಸಂದರ್ಭದಲ್ಲಿ ಹಿರಿಯರ, ಅಭಿಮಾನಿಗಳ, ಶಿಷ್ಯರ, ಎಲ್ಲರ ಅನಿಸಿಕೆಯ ನುಡಿ ಮಾಲಿಕೆ ಪೊತ್ತ ಬೃಹತ್ ಹೊತ್ತಿಗೆಯನ್ನು ಹೊರತಂದ ಮಾವಿನಕೆರೆಯ ಹೊಣೆಗಾರಿಕೆ-ಅಚ್ಚುಕಟ್ಟು-ಉತ್ಸಾಹದ ಬಗ್ಗೆ ಮಾಸ್ತಿಯವರಿಗೆ ಬಹಳ ಮೆಚ್ಚಿಗೆ. ಮಾಸ್ತಿ ಕಾಲದಿಂದಲೂ ಹೀಗೆ. ತರುಣರನ್ನು ಹುರಿದುಂಬಿಸಿ ಕಣಕ್ಕಿಳಿಸಿ ಗೆದ್ದು ಬಂದಾಗ ಹಿಗ್ಗಿ ಬೀಳುವ ಸ್ವಭಾವದವರೆಂದು ಮತ್ತೊಮ್ಮೆ ಹೇಳಬೇಕಿಲ್ಲ. ನನ್ನನ್ನ, ಏಕೆ ಅನೇಕರ ಗಮನವನ್ನು ಸೆಳೆಯುವುದೆಂದರೆ ಮಾಸ್ತಿಯವರ ನಿಯಮ ಬದ್ಧತೆ, ಯಾವುದೇ ಸಭೆ-ಸಮಾರಂಭದಿಂದ ಹಿಡಿದು, ಅವರ ದಿನಚರಿಯಲ್ಲಿ ಕೂಡಾ ಅದು ಎಡತಾಕುತ್ತದೆ. ಸಂಜೆಯ ನಾಲಕ್ಕು ಗಂಟೆ ಹೊಡೆಯುವುದು ತಪ್ಪಿದರೂ ಮಾಸ್ತಿ ಯವರ ಕ್ಲಬ್ಬಿನ ಪ್ರಯಾಣ ತಪ್ಪುವುದಿಲ್ಲ. ಒಮ್ಮೊಮ್ಮೆ ಉಣ್ಣೆಯ ಸೂಟು ಧರಿಸಿ.

ಮತ್ತೊಮ್ಮೆ ಕಚ್ಚೆಯ ಧೋತರದೊಂದಿಗೆ ಕೈಯಲ್ಲೊಂದು ಛತ್ರಿ-ಶಾಲು ಸಮೇತ ಹೊರಗೆ ಹೊರಟರೆ - ಸದಾ ಏನೋ ತುರ್ತು ಕೆಲಸವಿರುವಂತೆ ಅವಸರದ ಓಡಾಟ, ಬೆನ್ನು ಭಾಗದ ಆ ಠೀವಿ ನೋಡಿದವರಿಗೆ ಅವರನ್ನು ವೃದ್ಧರೆನ್ನಲು ಎಂಟೆದೆ ಬೇಕು.

"ನಮಸ್ಕಾರ ತಾತ"

ಮಿತ್ರರೊಟ್ಟಿಗೆ ಗಂಭೀರವಾಗಿ ಚರ್ಚಿಸುತ್ತ ಸರಸರನೆ ನಡೆದಿದ್ದ ಕಾಲುಗಳಿಗೆ ಸಡನ್ ಬ್ರೇಕ್ ! ಯಾವುದೋ ಗಂಭೀರವಾದ ಚರ್ಚೆಯಲ್ಲಿ - ಸಮಸ್ಯೆಯಲ್ಲಿ ಬಿಗಿದುಕೊಂಡಿದ್ದ ಹುಬ್ಬುಗಳು ಸಡಿಲವಾಗಿ, ಧ್ವನಿ ಕೇಳಿಬಂದ ಕಡೆ ಬಾಗುತ್ತ ಮರು ನಮಸ್ಕಾರ ಹೇಳುತ್ತಲೇ ಕೈ ಕೋಟಿನ ಒಳಕಿಸೆಗೆ ಸರಿಯುತ್ತದೆ. ಮಂಡಿಯೆತ್ತರಕ್ಕೂ ಬಾರದ ಪುಟಾಣಿಯ ಕಣ್ಣುಗಳು ಕಿಸೆಯಿಂದ ಹೊರ ಬರುವ ಕೈಯತ್ತ.....ಆ ಕೈ ಒಂದೊಂದಾಗಿ ಚಾಕಲೇಟ್-ಪೆಪ್ಪರಮೆಂಟು ತೆಗೆಯುತ್ತ ಕ್ಲಾಸು-ಮನೆ-ಹೆಸರು ಇತ್ಯಾದಿ ವಿಚಾರಿಸುತ್ತಲೇ ಹಂಚುತ್ತದೆ.' ಇವೆಲ್ಲ ಎಷ್ಟು ಸಹಜವಾಗಿ ನಿರೀಕ್ಷಿಸಿದಂತೆ ನಡೆಯುತ್ತದೆಂದರೆ ಕೆಲವೇ ಕ್ಷಣಗಳ ನಂತರ ಅದುವರೆಗೆ ಏನು ಆಗಿಯೇ ಇಲ್ಲವೆಂಬಂತೆ ಮೊದಲಿನ ಸ್ಥಿತಿಗೇ ಒಂದು "ಅದು ಹೇಗಾಗುತ್ತೇತೀರಿ" ಎನ್ನುತ್ತ ಮಾತಿಗಾರಂಭಿಸುತ್ತಾರೆ. ಮಾಸ್ತಿ ಅವರು ಎಂಥಾ ಚರ್ಚೆಗೂ ಸಿದ್ಧ. ಇವರ ವಿಚಿತ್ರ ವರ್ತನೆಗೆ ಬೆರಗಾಗಿ ಗಂಭೀರವಾದ ಮಾತು - ಚರ್ಚೆಗೆ ಅಡ್ಡಿಯಾದ ಪ್ರಸಂಗದಿಂದ ಅಸಹನೆಗೆ ತುತ್ತಾದ ಮಿತ್ರರು ಸಹಜಸ್ಥಿತಿಗೆ ಬರಲು ಕೆಲವಲ್ಲ–ಹಲವು ನಿಮಿಷಗಳಾದರೂ ಸಾಲದು. ಆದರೆ ಈ ಮಕ್ಕಳ ತಾತನಿಗೆ ಅದಾವುದರ ಪರಿವೆಯೂ ಇಲ್ಲ–

ಮಾಸ್ತಿ ಎಲ್ಲರ ಆಸ್ತಿ, ಮೇಲೆ ಹೇಳಿದ ಪುಟಾಣಿಗಳಲ್ಲಿ ನನ್ನ ಕಿರಿಯ ಮಗನೂ ಒಬ್ಬ. 'ನಿಜಗಲ್ಲಿನರಾಣಿ' ಕತೆ ಕುರಿತು ಕ್ಲಾಸಿನಲ್ಲಿ ಮೇಡಂ ಹೇಳಿದಾಗ ಶ್ರೀನಿವಾಸನೇ-ಮಾಸ್ತಿತಾತ ಅಂತ ತಿಳಿದು–ತಾತಕೊಟ್ಟ ಸಿಹಿ ಚಪ್ಪರಿಸುತ್ತಲೇ ಒಳಬಂದವ "ಅಮ್ಮ–ಮಾಸ್ತಿ ತಾತ ಬರೆದ ಪುಸ್ತಕ ಯಾವುದು ?" ಎನ್ನುತ್ತ-ನನ್ನ ಉತ್ತರಕ್ಕೂ ಕಾಯದೆ ಕಪ್ಪಾನಲ್ಲೆಲ್ಲ ತಡಕಿ ಸಣ್ಣ ಕತೆ, ಪದ್ಯ ಹುಡುಕಿ ತೆಗೆದೇ ಬಿಟ್ಟ ಒಮ್ಮೆ–

ಓದಲು ಆರಂಭಿಸಿದ, ಊಟ-ತಿಂಡಿ ಮರೆತು ಕೂತ, ಓದೇಓದಿದ-ಮೂರನೇ ದಿನದಿಂದಲೇ ಅವನ ದೃಷ್ಟಿಯಲ್ಲಿ ಮಾಸ್ತಿ ಬರೀ ಪೆಪ್ಪರ್‌ಮೆಂಟಿನ ತಾತ ಆಗಿರದೆ 'ಜೋನ್ ಆಫ್ ಆರ್ಕ್' ನೀಲಿಗಾರಮಾದ, ಗೌಡರಮಲ್ಲಿ, ಪದ್ಯಗಳು, ರಂಗಪ್ಪನ ಪ್ರಸಂಗ, ಮಂಗಮ್ಮನ ಕಥೆ ಎಲ್ಲ ಬರೆದ ತಾತ ಆಗಿಬಿಟ್ಟದ್ದರು.

ತನ್ನ ಗೆಳೆಯರೊಟ್ಟಿಗೆ ಮಾಸ್ತಿ ತಾತ ಬರೆದ ಕತೆ ಕುರಿತು ಅವನದೇ ಭಾಷೆಯಲ್ಲಿ ವ್ಯಾಖ್ಯಾನಿಸಿದೇ ವ್ಯಾಖ್ಯಾನಿಸಿದ್ದು.

ಅದೆಲ್ಲ ನನಗೊಂದು ಕೌತುಕ ಅನಿಸಿತ್ತು. ಅಂಥಾ ಸಂದರ್ಭದಲ್ಲೆಲ್ಲ ಮಾಸ್ತಿಯವರನ್ನು ನಾವಿನ್ನು ಅನೇಕ ದೃಷ್ಟಿಯಿಂದ ಕಂಡುಕೊಳ್ಳುವ ಪ್ರಯತ್ನ ಮಾಡಿಯೇ

ಇಲ್ಲವೆನಿಸಿತ್ತು. ಆ ಮಕ್ಕಳ ಮಾತಿನಲ್ಲಿ ಹೇಳಲಾಗದ, ಅವರು ಕಂಡುಕೊಂಡ ಸರಳ
ಆದರೆ ಮುಖ್ಯ ವಿಚಾರಗಳನ್ನು ಗಮನಿಸದೇ ಏನೋ ಹುಡುಕುತ್ತ ಖಾಲಿಯಾಗಿ
ಕೊಳ್ಳುವ ಕೇವಲ ಶಬ್ದಗಳ ಸ್ವಾಮ್ಯಕ್ಕೆ ಬಲಿಯಾದ ಪ್ರವೃತ್ತಿಯ ಬಗ್ಗೆ ಬೇಸರ
ಬಾದಿತ್ತು. ಮಾಸ್ತಿಯವರನ್ನ ಹೇಗೆ ಗುರುತಿಸಲೂ ಆಗದೆ ತೊಳಲಿದ್ದೇನೆ,
ಅನೇಕ ಬಾರಿ-

ಆತ್ಮೀಯತೆ-ಅನುಕಂಪಗಳ ಅರ್ಥ, ಹುಡುಕಬೇಕು ಇವರಲ್ಲಿ. ನಮ್ಮ ರಸ್ತೆಗೆ
ಬಂದಾಗೆಲ್ಲ ಒಳಗೆ ನುಸುಳಿ 'ಹೇಗಿದ್ದೀ ತಾಯಿ ?' ಆರೋಗ್ಯ ನೋಡಿಕೊ" ಎನ್ನುತ್ತ
ನನ್ನ ಅನೇಕ ವೈಯುಕ್ತಿಕ, ಆರ್ಥಿಕ ಹಾಗೂ ವೃತ್ತಿಯ ವಿಚಾರಗಳನ್ನೆಲ್ಲ ವಿಚಾರಿಸಿ
ಸಲಹೆಕೊಡುವ ಮಾಸ್ತಿಯವರು ನನ್ನ ಜೀವನದ ಅನೇಕ ಕಹಿ ಸಂದರ್ಭಗಳಲ್ಲಿ
ಮಾನಸಿಕವಾಗಿ ಧೈರ್ಯ ತುಂಬಿ ಬದುಕಲು ಅನುವು ಮಾಡಿದ್ದಾರೆಂಬುದನ್ನು
ಕೃತಜ್ಞತೆಯಿಂದ ನೆನೆಯುತ್ತೇನೆ.

ಮಾಸ್ತಿ ಎಂದೊಡನೆ ಶಬ್ದಕ್ಕೆ ಮೀರಿದ ಭಾವ ತುಂಬಿ ನನ್ನಲ್ಲಿ ಭಾವುಕತೆ ತುಂಬಿ
ಬಿಡುತ್ತದೆ. ಅವರೊಂದಿಗಿನ ಮಾತು ನನಗೊಂದು ಪಾಠ.

(ಮಲ್ಲಿಗೆ "ಮಾಸಪತ್ರಿಕೆಗೆ ಮಾಸ್ತಿಯವರ ಸಂದರ್ಶನ ಮಾಡಿದ್ದೆ. ಅಚ್ಚಾದ
ಪ್ರತಿ ನನಗೆ ಸಿಗಲಿಲ್ಲ. ಆಕಸ್ಮಾತ್ತಾಗಿ ಸಿಕ್ಕ ಹಸ್ತ ಪ್ರತಿಯನ್ನೇ ಇಲ್ಲಿ ಬಳಸಿದ್ದೇನೆ
ಅಚ್ಚಾದ ಸಂದರ್ಶನದಲ್ಲಿ ಹಲವಂಶಗಳನ್ನು ಪುಟಮಿತಿ ಗಮನಿಸಿ ತೆಗೆದು ಹಾಕಿದ್ದ
ಆದ್ದರಿಂದ ಇದು ಕೊಂಚ ವ್ಯತ್ಯಾಸವಾಗಿ ಕಂಡರೆ ಕ್ಷಮೆ ಇರಲಿ.)

....ತಿಂಗಳ ದಿನ ಜೊತೆಯಾಗಿ ಸುತ್ತಿ ಜೊತೆಯಾಗಿ ಕುಳಿತು, ಜೊತೆಯಾಗಿ ನಡೆದು, ನಾನು, ಬೇಂದ್ರೆ
ತುಂಬ ಹತ್ತಿರದ ಗೆಳೆಯರಾದೆವು. ಸೋದರರಾದೆವು. ಕರ್ನಾಟಕ ಮಾತೆ. ಭಾರತ ಮಾತೆ
ಭೂ ಮಾತೆ, ಎಂಬಲ್ಲಿ ಮಾತೆ ಶಬ್ದ ಬರಿಯ ಅಲಂಕಾರ ಅಲ್ಲ ಎಂದು ಹಿಂದಿನಿಂದಲೂ ನನ್ನ ನಂಬಿಕೆ
ಲೋಕಮಾತೆ ಒಬ್ಬಳೇ. ಅವಳೇ ಭೂಮಿ, ಅವಳೇ ಭಾರತ, ಅವಳೇ ಕರ್ನಾಟಕ, ಅವಳೇ ನಮ್ಮ
ಒಬ್ಬೊಬ್ಬರನ್ನೂ ಹೆರುವ ಒಂದೊಂದು ಗ್ರಾಮ. ಇದು ಸದಾ ಕಾಲ ಪೂರ್ಣವಾಗಿ ಅನುಭವ
ಆದವನು ಪೂರ್ಣಮಾನವ. ಸದಾಕಾಲ ಪೂರ್ಣವಾಗಿ ಅನುಭವ ಆಗದಿದ್ದರೂ ವರ್ಷದಲ್ಲಿ ಒಂದು ಕ್ಷ
ಇದರ ಅನುಭವ ಆದ ಮನುಷ್ಯ ಅದರ ಸುಖಕ್ಕೆ ಮಾರುಹೋಗುತ್ತಾನೆ. ಬೇಂದ್ರೆಯವರೊಂದಿ
ತಿಂಗಳ ದಿನ ನಡೆದ ಈ ಸಂದರ್ಭದಲ್ಲಿ ನನಗೆ ಈ ಅನುಭವ ಹಲವು ಬಾರಿ ಆಯಿತು, ಕನ್ನಡ ಮಾ
ನನ್ನ ಹೆತ್ತತಾಯಂತೆ ಒಂದು ದಿಟವಾದ ದೈವ ಅವಳು. ನನ್ನ ಒಡಹುಟ್ಟಿದ ಸೋದರರನ
ಹೇಗೋ ಹಾಗೇ ನಾನು ಬೇಂದ್ರೆಯವರನ್ನು ಸೋದರ ಎಂದು ಕಾಣಲು ಮೊದಲಾಯಿತು"

ಮಾಸ್ತಿ ವೆಂಕಟೇಶ ಅಯ್ಯಂಗಾರ

(ಭಾವ

# ಮಾಸ್ತಿ

ಕೆ. ಎಸ್. ನಿಸಾರ್ ಅಹಮದ್

೧

ಸದಾ ಇವರು ಹೀಗೆಯೇ–
ಇಲ್ಲೆ, ಗಾಂಧಿಬಜಾರಿನ ಹಿರಿಚೌಕದೆದುರಲ್ಲೇ,
ಸಿಗರೇಟು ಸೇದುತ್ತಲೋ ಪತ್ರಿಕೆಯನೋದುತ್ತಲೊ
ಹರಟುತ್ತಲೊ ಇದ್ದಾಗ ಎದುರಾಗುವರು ಇದ್ದಕಿದ್ದಂತೆ
ನಿರ್ದಿಷ್ಟ ಸಮಯದಂತೆ.

ವಯಸು ಅನುಭವ ಹೂಡಿ ಸುಖದುಃಖ ಬೆಳೆದ ಮುಖ,
ಹಿಂದೊಮ್ಮೆ ನೆಲಸಿದ್ದ ಬೆಳಕ ಕನವರಿಸುತಿಹ ಮಂದಗಣ್ಣು;
ಸಾಂತ್ವನವ ನುಡಿದಿರುವ ಹಳೆನಮೂನೆಯ ಚಶ್ಮ
ಅದೇ ಕೊಡೆಯು ಗದೆ :
ಬೆದರಿಸಲು ಭಿಕ್ಷುಕರ ಹುಡುಗರನ್ನ,
ಬೀದಿಕುನ್ನಿಯ, ಪೋಲಿದನಗಳನ್ನ,
ಎದುರಿಸಲು ಮಳೆ ಬಿಸಿಲ ದಾಳಿಯನ್ನ,
ಸಾಲುವೃಕ್ಷದ ಹಕ್ಕಿಹಿಕ್ಕೆಯನ್ನ.

ಇವರು ನನ್ನೆದುರಲ್ಲಿ ಹಾದು ಹೋದಾಗೆಲ್ಲ
ಹಳ್ಳಿಗಾಡಿನ ಕಡೆಯ ಸುಪ್ರಸನ್ನತೆಯೊಂದು ನಗರಕ್ಕೆ ಸಂದಂತೆ,
ಬೆಳಗಾಗ ಛಳಿಯಲ್ಲಿ ಬಿಸಿನೀರ ಮಿಂದಂತೆ
ಎದೆ ಸ್ವಚ್ಛಗೊಳ್ಳುತ್ತದೆ, ಹಗುರಕ್ಕೆ ಸಲ್ಲುತ್ತದೆ.

೨

ಗವೀಪುರದಿಂದ ಗಾಂಧಿಬಜಾರಿನ ಕೊನೆಗೆ
ಪ್ರಕೃತಿಯು ಕರೆಯಂತೆ ಎಳೆಯುವುದು ಕ್ಲಬ್ಬು
ಅಲ್ಲಿ ಕಾಯುತ್ತಾರೆ ಕಿಟ್ಟಿ ಗುಂಡೂ ಸುಬ್ಬು–
ಹೊಚ್ಚ ಹೊಸ ಯೌವನದ ರಂಗುಗಳ ಗುಂಗುಗಳ,

ಫ್ಯಾಶನ್ನು ಪಹರೆಗಳ, ಕಸಿಹಣ್ಣು ಚಹರೆಗಳ
ವರ್ತಮಾನದ ನಟ್ಟನಡುವಿನಲ್ಲಿ
ಹುಚ್ಚು ಹುರುಪಿನ ನೂಕುನುಗ್ಗುಲಲ್ಲಿ-
ಅಚ್ಚು ಕಟ್ಟಿನ ಹಾಗೆ,
೧೮೦ ಮಾದರಿಯ ಬೆಂಗಳೂರಿನ ಹಾಗೆ,
ಕಾಲ ಕುಗ್ಗಿಸಿದೊಡಲು ಕಾಲನೆಳೆಯುತ ಬರಲು
ಈ ವೃದ್ಧರನು ಕಂಡು 'ಅಯ್ಯೋ' ಎಂದಿದ್ದೇನೆ ;
ಎನ್ನುತ್ತಿರುವಂತೆಯೆ ಕೈಯು ಮುಗಿದಿದ್ದೇನೆ.

ರಸ್ತೆ ಹಿರಿದಾಗಿ ಫುಟ್‌ಫಾತು ಕಿರಿದಾಗಿ
ಓಡಾಟ ಹೆಚ್ಚಾಗಿ, ನೆಮ್ಮದಿಯೆ ಪೆಚ್ಚಾಗಿ,
ಲೋಕ ಕಂಪ್ಯೂಟರಿನ ಸ್ವಿಚ್ಚು ತಂತಿಗಳಂತೆ ಸಂದಿಗ್ಧವಾಗಿ,
ಬೆಲೆಗಳೆಲ್ಲ ಬಿದ್ದು ಹರಡಿ ದಿಕ್ಪಾಪಾಲು
ಎಸೆಯುತಿವೆ ಪ್ರತಿಕ್ಷಣವು ಸರಳ ವೃದ್ಧಾಪ್ಯಕ್ಕೆ ಹಿರಿಸವಾಲು.

೩

ಕ್ಲಬ್ಬಿನಲಿ ನಿಶ್ಚಿಂತೆಯಾಗಿ ಎಲೆ ಕಲಿಸುವುದು
ಇಪ್ಪತ್ತೆಂಟನಾಡುವುದು-ನಡುವೆ ಅದೂ ಇದೂ
ಇಪ್ಪತ್ತೆಂಟನಾಡುವುದು :
ನಂಬರೆರಡರ ಬಸ್ಸಿನೆದುರು ಬಾಳೆಯ ಸಿಪ್ಪೆ
ಟೈಲರನ ಎಡಗಾಲನುಳುಕಿಸಿದ್ದು ;
ರಾತ್ರಿ ಪುರಭವನದಲಿ ಸಂಗೀತ ಸಾಮ್ರಾಜ್ಞಿ
ಶಂಕರಾಭರಣದಲಿ ಪುಲಕಿಸಿದ್ದು ;
ಅಬ್ದುಲನ ಹೈಕೋರ್ಟು ರಿಟ್ಟು ವಜಾ ಆದದ್ದು ;
ಖೋಟ ನೋಟ್ ಕೃಷ್ಣನಿಗೆ ಕಠಿಣ ಸಜ ಆದದ್ದು ;
ಬದರಿ ನಾದಿನಿಗೊಬ್ಬ ಒಳ್ಳೆವರ ಸಿಕ್ಕಿದ್ದು ;
ರಷ್ಯ ಚೀನಾ ಕ್ಯೂಬ ಅಮೇರಿಕ ವಾರ್ತೆ ಮಿಕ್ಕಿದ್ದು—
ಅದೂ ಇದೂ ಇಪ್ಪತ್ತೆಂಟನಾಡುವುದು.
ನಡುವೆ ತಪ್ಪಾಡಿದರೆ ಎದುರಾಳಿಯಲ್ಲೊಬ್ಬ
ಮನೆಯ ಕಿರಿಸೊಸೆಯಂತೆ ಮುಖವನೂದಿಸಿ ಬೀಗಿ
ಗೊಣಗುವುದು :   Let us play t gehame
for game's sake.

ಇನ್ನಿವರ ಜೀವನ ? ಅದು ಕೂಡ ಹೀಗೆಯೇ, ಎಲ್ಲ ಖುಲ್ಲ ;
ಖುಷಿಗಷ್ಟೆ ನಷೆಗಲ್ಲ.
ಗಂಟೆಗಟ್ಟಲೆ ಕಲಸಿದರು ಕೈ
ಬಂದರಿಪ್ಪತ್ತು ಹೋದರಿಪ್ಪತ್ತು ನ.ಪೈ.,
ಕೂಗು ಹುಸಿಮುನಿಸುಗಳ ನಡುವೆ ತುಟಿಗಳ ಮೊಗ್ಗೆ
ಬಿರಿಸಿ ನಕ್ಕಾಗಿವರು ಥೇಟ್ ಜುಲೈ ತಿಂಗಳಿನ ಶಿವಮೊಗ್ಗೆ :
ಚಣಕ್ಕಷ್ಟು ಚಳಿ ನೂಲು, ಒಂದಿಷ್ಟು ಹೂಬಿಸಿಲು
ಹೊರಗೆ ಕಚಪಿಚ ಕೆಸರು, ಒಳಗೆ ಬೆಚ್ಚನೆ ಸೂರು.

೪

ಹೊತ್ತಾಯಿತೆ ? ಆವರಿಸಿತೇ ಮಬ್ಬು ?
ಕೂಡೆತೆರೆದು ಏಕಾಕಿ ಮನೆಯತ್ತ ನಡೆಯುವರು ಮರೆತು ಕ್ಲಬ್ಬು.
ಗಾಂಧಿಬಜಾರೀಗ ತಿಳಿಯಾಗಿ ಫರ್ಲಾಂಗು ಬೆಳಕ ಹಬ್ಬ–
ಚೌಕದೆಡೆ ಆಗೀಗ ಪ್ರತಿಪಕ್ಷದವನೊಬ್ಬ
ಎಲುಬಿರದ ನಾಲಗೆಯ ನಾಚು ನಡೆಸುತ್ತಿರಲು
ಸರ್ಕಾರದ ಸಫಲತೆಯ ಹುಣ್ಣ ನೊಣ–ಸುತ್ತಿರಲು,
ದೀಪಗಳ ಝಗಮಗದಿ ಕಣ್ಸೋತು ನಿಂತಿರಲು
ಮನೆಮಠವ ಮರೆತಿರುವ ಮಂದಿಸಂತೆ
ಬೊಬ್ಬೆ ಅಬ್ಬರದೆದುರು ಗುರುತುಹತ್ತದ ಹಾಗೆ
ಕಾಲಿಗೊತ್ತಿದ ಗಾಜ ಚೂರ ದೂರಕೆ ಎಸೆದು
ಸಾಗುವರು ಸದ್ದಿರದೆ ಚಂದ್ರನಂತೆ ;
ಗಂಭೀರವಾಗಿ
ಕರ್ತವ್ಯದೆಚ್ಚರಿನ ಸನ್ನೆಯಂತೆ.

ನೋಡುತ್ತಲಿದ್ದಂತೆ
ಹೋಟಲಿನ ಬದಿಯಲ್ಲಿ ಬೀದಿ ತಿರುಗನು ಹೊಕ್ಕು
ಮರೆಯಾಗುವರು ಮಾಸ್ತಿ–
ಸಂದ ಜೀವನದೊಂದು ರೀತಿಯಂತೆ,
ಸರಳ ಸದಭಿರುಚಿಯ ಖ್ಯಾತಿಯಂತೆ.

# ಡಾ|| ಮಾಸ್ತಿ ವೆಂಕಟೇಶ ಅಯ್ಯಂಗಾರ್
## (1891-1986)

ಶ್ರೀ ನೀಲತ್ತಹಳ್ಳಿ ಕಸ್ತೂರಿ

ಸಮಕಾಲೀನ ಭಾರತೀಯ ಸಾಹಿತಿಗಳಲ್ಲಿ ಬಹುಶಃ ಅತ್ಯಂತ ಹಿರಿಯರಾದ ಮಾಸ್ತಿ ವೆಂಕಟೇಶ ಅಯ್ಯಂಗಾರ್ ಅವರು ಕರ್ನಾಟಕದ ಕೋಲಾರ ಜಿಲ್ಲೆಗೆ ಸೇರಿದ ಮಾಸ್ತಿಯ ಹತ್ತಿರವಿರುವ ಹೊಂಗೇನಹಳ್ಳಿ ಎಂಬ ಗ್ರಾಮದಲ್ಲಿ 6-6-1891ರಂದು ಜನಿಸಿದರು. ಬಡತನದ್ದಾದರೂ ಸುಸಂಸ್ಕೃತವಾದ ಹಾಗೂ ಸಂಪ್ರದಾಯಸ್ಥವಾದ ಮನೆತನಕ್ಕೆ ಸೇರಿದ ಅವರ ಪ್ರಾಥಮಿಕ ಶಿಕ್ಷಣ ಕೋಲಾರ ಜಿಲ್ಲೆಯ ಶಿವಾರಪಟ್ಟಣ ಮೈಸೂರು ಹಾಗೂ ಬೆಂಗಳೂರುಗಳಲ್ಲಿ ನಡೆದು, 1912ರಲ್ಲಿ ಬಿ. ಎ. ತರಗತಿ ಗತಿಯಲ್ಲಿ ಮೊದಲಿಗರಾಗಿ ನಿಂತರು. ನಂತರ 1913ರಲ್ಲಿ ಮೈಸೂರು ಸಿವಿಲ್ ಸರ್ವಿಸ್ ಪರೀಕ್ಷೆಗೆ ಕುಳಿತು ಅಲ್ಲಿಯೂ ಮೊದಲಿಗರಾಗಿಯೇ ನಿಂತರು. ಮರು ವರ್ಷದಲ್ಲಿ ಮದ್ರಾಸ್ ವಿಶ್ವವಿದ್ಯಾಲಯದಿಂದ ಎಂ. ಎ. ಯನ್ನೂ ಮುಗಿಸಿದರು. 1914ರ ಫೆಬ್ರವರಿಯಲ್ಲಿ, ಅರಸರ ಆಳ್ವಿಕೆಗೆ ಸೇರಿದ್ದ ಹಿಂದಿನ ಮೈಸೂರು ರಾಜ್ಯದ ಸಿವಿಲ್ ಸರ್ವಿಸನ್ನು ಪ್ರವೇಶಿಸಿದರು. ತಮ್ಮ ಯೋಗ್ಯತೆ, ಏಕಾಗ್ರತೆ ಹಾಗೂ ನಿಷ್ಠೆಯಿಂದಾಗಿಯೇ ತಮ್ಮ ಅಧಿಕಾರಾವಧಿಯಲ್ಲಿ ಕ್ರಮವಾಗಿ ಮೇಲೇರುತ್ತಲೇ ನಡೆದು, ಡೆಪ್ಯೂಟಿ ಕಮಿಷನರ್ (ಕಲೆಕ್ಟರ್), ಸೆನ್ಸಸ್ ಸೂಪರಿಂಟೆಂಡೆಂಟ್, ಸರ್ಕಾರದ ಸೆಕ್ರೆಟರಿ, ಹೀಗೆ ವಿವಿಧ ಕಾರ್ಯಕ್ಷೇತ್ರಗಳಲ್ಲಿ ಸೇವೆ ಸಲ್ಲಿಸಿ ಕೊನೆಗೆ ಎಕ್ಸೈಸ್ ಕಮಿಶನರ್ ಕೂಡ ಆದರು. 1942ರಲ್ಲಿ ಮೈಸೂರಿನ ಮಹಾರಾಜರು ಅವರಿಗೆ ರಾಜಸೇವಾ ಪ್ರಸಕ್ತ ಎಂಬ ಬಿರುದನ್ನು ನೀಡಿ ಗೌರವಿಸಿದರು. ಮಹಾರಾಜರ ಕೌನ್ಸಿಲ್‌ನಲ್ಲಿ ತಮಗೆ ದೊರೆಯಬೇಕಿದ್ದ ಮೇಲಿನ ಹುದ್ದೆಯನ್ನು ನೀಡುವಲ್ಲಿ ತಮ್ಮನ್ನು ಕಡೆಗಾಣಿಸಲಾಯಿತೆಂಬ ಕಾರಣಕ್ಕಾಗಿ, 1943ರಲ್ಲಿ ತಾವಾಗಿಯೇ ನಿವೃತ್ತಿಯನ್ನು ಹೊಂದಿದರು. ಆನಂತರದಲ್ಲಿ ಕೊನೆಯುಸಿರಿನ ತನಕವೂ ಅವರ ಇಡೀ ಜೀವನ ಸಾಹಿತ್ಯ ಹಾಗೂ ಸಂಸ್ಕೃತಿಗಳಿಗಾಗಿಯೇ ಮೀಸಲಾಯಿತು.

1910ರಲ್ಲಿ, ಇನ್ನೂ ವಿದ್ಯಾರ್ಥಿ ದೆಸೆಯಲ್ಲಿದ್ದಾಗಲೇ, 'ರಂಗನ ಮದುವೆ' ಎಂಬ ಅವರ ಕತೆ ಒಂದು ಪತ್ರಿಕೆಯಲ್ಲಿ ಪ್ರಕಟಗೊಂಡು ಮಾಸ್ತಿಯವರ ಸಾಹಿತ್ಯ ಸೃಷ್ಟಿಗೆ ನಾಂದಿಯಾಯಿತು. ಅಂದಿನಿಂದ ಸುಮಾರು ಏಳು ದಶಕಗಳಿಗೂ ಮೀರಿದ ಕಾಲಾವಧಿಯಲ್ಲಿ ಅವರ ಸಮೃದ್ಧ ಲೇಖನಿಯು 'ಶ್ರೀನಿವಾಸ' ಎಂಬ ಕಾವ್ಯನಾಮ ದಲ್ಲಿ ಅವ್ಯಾಹತವಾಗಿ ಕ್ರಿಯಾಶೀಲವಾಗಿತ್ತು. ವಸ್ತುವಿನಲ್ಲೇ ಆಗಲಿ ಅವರ

ಸದಲ್ಲೇ ಆಗಲಿ, ಅತ್ಯದ್ಭುತವೆನಿಸುವ ಮಟ್ಟಿಗೆ ವಿಸ್ತಾರವೂ, ವೈವಿಧ್ಯ
ವೂ ಆದ ಸಾಹಿತ್ಯ ಸಂಪತ್ತು ಕನ್ನಡದಲ್ಲಿ ತುಂಬ ಬಂತು. ಮಾನವಿಕ
ಸ್ಯೆಗಳನ್ನು ಅತ್ಯಂತ ತೀವ್ರವಾಗಿಯೂ ನೇರವಾಗಿಯೂ ಆದರೆ
ಸರಳವಾಗಿಯೂ ಚಿತ್ರವತ್ತಾಗಿಸಿದ ಅವರ ಸಾಹಿತ್ಯದಲ್ಲಿ ಮಾನವ ಜೀವನ
ಭಾವನೆಗಳು ಎಲ್ಲ ವೈವಿಧ್ಯಗಳು ಸಮೃದ್ಧವಾಗಿ ತುಂಬಿವೆ. ಮಹತ್ತರ
ಹಿರಿಮೆಯನ್ನು ಒಳಗೊಂಡಿವೆ. ಸಣ್ಣ ಕತೆಗಳನ್ನಷ್ಟೇ ಅಲ್ಲದೆ ಕಾದಂಬರಿ
ಕ, ಗೀತನಾಟಕ, ಸಾಹಿತ್ಯ ವಿಮರ್ಶೆ, ಪ್ರಬಂಧ, ಜೀವನ ಚರಿತ್ರೆ ಮುಂತಾದ
ಸಾಹಿತ್ಯ ಪ್ರಕಾರಗಳನ್ನೇ ಆಗಲಿ, ಜೀವನ, ಸಾಹಿತ್ಯ, ಸಂಸ್ಕೃತಿ, ನೀತಿಶಾಸ್ತ್ರ
ಂತಾದವುಗಳ ಬಗೆಗಿನ ಅಧ್ಯಯನವನ್ನೇ ಆಗಲಿ ಅತ್ಯಂತ ಸೂಕ್ಷ್ಮವಾಗಿ ನಿರ್ವಹಿ
ಲ್ಲಿ ಮಾಸ್ತಿಯವರು ಪರಿಪೂರ್ಣವಾದ ಸಫಲತೆಯನ್ನು ಪಡೆದಿದ್ದಾರೆ. ಕನ್ನಡ
ೇದಯ ಸಾಹಿತ್ಯಕ್ಕೆ ಅಪರಿಚಿತವಾಗಿದ್ದ ಸಣ್ಣಕತೆ, ಪ್ರಾಸವನ್ನು ಬಿಟ್ಟಪದ್ಯ.
ಪದಿ, ಕಥನ ಕಾವ್ಯ- ಮುಂತಾದ ಸಾಹಿತ್ಯ ಪ್ರಕಾರಗಳಲ್ಲಿ ನಡೆದ ಪ್ರಯೋಗ
ಮುಂಚೂಣಿಯಲ್ಲಿ ಮಾಸ್ತಿಯವರ ಕೃತಿಗಳು ಇದ್ದವು. ಅವರ ಪ್ರಕಟಿತ ಕೃತಿ
ಪಟ್ಟಿಯಲ್ಲಿ ಸಣ್ಣ ಕತೆಗಳನ್ನೊಳಗೊಂಡ 15 ಕೃತಿಗಳು, 4 ಕಾದಂಬರಿಗಳು,
ಹ (1922)ದಿಂದ ಆರಂಭವಾಗಿ ಅವರ ಮಹಾಕಾವ್ಯ 'ಶ್ರೀ ರಾಮ
ಭಿಷೇಕ' (1972)ದ ವರೆಗಿನ 17 ಕಾವ್ಯಕೃತಿಗಳು, 17 ನಾಟಕಗಳು, ಸಾಹಿತ್ಯ
ಮಾಂಸೆ ಹಾಗೂ ವಿಮರ್ಶೆಗಳನ್ನೊಳಗೊಂಡ 12 ಕೃತಿಗಳು, ಮೂರು ಭಾಗಗಳಲ್ಲಿ
ಟಗೊಂಡ 'ಭಾವ' ಎಂಬ ಅವರ ಸ್ವಂತ ಜೀವನ ಚರಿತ್ರೆಯನ್ನು ಒಳಗೊಂಡಂತೆ
ೀವನ ಚರಿತ್ರೆಗಳು, ಜೀವನ ಹಾಗೂ ಸಾಹಿತ್ಯಗಳಿಗೆ ಸಂಬಂಧಿಸಿದಂತೆ ಅವರ
ೋಚನೆಗಳಿಂದ ತುಂಬಿದ 9 ಕೃತಿಗಳು ಸೇರಿವೆ. ಕನ್ನಡ ಪ್ರಾಚೀನ ಕಾವ್ಯಗಳಲ್ಲಿ
ೃಷ್ಟವೆನಿಸಿದ ಗದ್ಯ ಹಾಗೂ ಪದ್ಯಗಳ 6 ಗ್ರಂಥಗಳನ್ನು ಸಂಪಾದಿಸಿರುವುದೇ
ದೆ, ಶೇಕ್ಸ್‌ಪಿಯರ್, ಟಾಗೂರ್ ಹಾಗೂ ಲೀಲಾಶುಕರ ಕೃತಿಗಳನ್ನೂ ಒಳ
ಂಡಂತೆ ಎಂಟು ಕೃತಿಗಳನ್ನು ಕನ್ನಡಕ್ಕೆ ಅನುವಾದಿಸಿದ್ದಾರೆ. ಕನ್ನಡದಲ್ಲಿ ರಚಿತ
ರ ಇವಿಷ್ಟು ಕೃತಿಗಳನ್ನೇ ಅಲ್ಲದೆ ಇಂಗ್ಲಿಷ್‌ನಲ್ಲೂ 15 ಗ್ರಂಥಗಳನ್ನು ಪ್ರಕಟಿಸಿ
ರೆ ಇವುಗಳಲ್ಲಿ ಅವರದೇ ಕನ್ನಡ ಕತೆಗಳ ಅನುವಾದಗಳು, ರಾಮಾಯಣ
ಾಭಾರತ ಹಾಗೂ ಗೀತೆಗಳ ಬಗೆಗಿನ ಸಾಹಿತ್ಯ ವಿಮರ್ಶೆಗಳೂ ಸೇರಿವೆ.

ಆಧುನಿಕ ಕನ್ನಡ ಸಣ್ಣಕತೆಗಳ ಜನಕನೆಂದು ಮಾಸ್ತಿಯವರನ್ನು ಗುರುತಿಸಿ
ುದು ಸತ್ಯವೇ ಸರಿ. ಅವರು ಹುಟ್ಟು ಕತೆಗಾರರಷ್ಟೇ ಅಲ್ಲ ಪ್ರವೀಣ ಕತೆ
ರರು ಹೌದು. ಬಹುತೇಕ ಅವರ ಎಲ್ಲ ಸಣ್ಣ ಕತೆಗಳಲ್ಲೂ ಮನುಜ ಭಾವಗಳ
ಗಿನ ಅವರ ಅಪರೂಪದ ಸೂಕ್ಷ್ಮ ದೃಷ್ಟಿ ಎದ್ದು ಕಾಣುತ್ತದೆ. ಅವುಗಳ ನಿರ್ವ
ಯಲ್ಲಿ ಅಷ್ಟೇ ನವಿರು ನಾಜೂಕು ಕಾಣುತ್ತದೆ. ಅವರ ಕೃತಿಗಳಲ್ಲಿ ಬರುವ
ಸಾಧಾರಣವಾದ ವ್ಯಕ್ತಿ ಚಿತ್ರವೂ- ಅದು ಗಂಡೇ ಇರಲಿ ಹೆಣ್ಣೇ ಇರಲಿ

ದೇವಾಧಿದೇವತೆಗಳು ರಾಜಾಧಿರಾಜರೂ ಆಗಿರುವ ವ್ಯಕ್ತಿಗಳಷ್ಟೇ ಪ್ರಾಮುಖ್ಯ ವಾಗುತ್ತವೆ. ಬಹು ಆತ್ಮೀಯತೆಯಿಂದ, ಎಚ್ಚರದಿಂದ ಅವುಗಳನ್ನು ಚಿತ್ರಿಸಿದ್ದಾರೆ. ಅವರ ಅನೇಕ ಕತೆಗಳು ಇತರ ಭಾರತೀಯ ಭಾಷೆಗಳಿಗಷ್ಟೆ ಅಲ್ಲದೆ, ಇಂಗ್ಲಿಷ್, ಜರ್ಮನ್, ಸ್ಪಾನಿಷ್, ರಷ್ಯನ್, ಹಾಗೂ ಡಚ್ ಭಾಷೆಗಳಿಗೂ ಅನುವಾದಗೊಂಡಿವೆ. ಅವರ ಸುಂದರ ಕಾದಂಬರಿ 'ಸುಬ್ಬಣ್ಣ' ಸಂಗೀತಗಾರನೊಬ್ಬನನ್ನು ಕುರಿತ ಮನ ಕಲಕುವ ಕತೆ,ಯನ್ನು ಒಳಗೊಂಡಿದೆ. ಅವರ ಚಾರಿತ್ರಿಕ ಕಾದಂಬರಿ 'ಚೆನ್ನಬಸವ ನಾಯಕ ಕತೆಗಾರನಾಗಿ ಮಾಸ್ತಿ ಎಷ್ಟು ಉತ್ಕೃಷ್ಟರೆಂಬುದಕ್ಕೆ ಜ್ವಲಂತ ನಿದರ್ಶನ. ನಂತರದಲ್ಲಿ ಅವರು ಬರೆದ 'ಚಿಕವೀರರಾಜೇಂದ್ರ' ಎಂಬ ಕಾದಂಬರಿಯು ರಾಜಾಧೀನವಾಗಿದ್ದ ಅಂದಿನ ಕೊಡಗು ಸಾಮ್ರಾಜ್ಯದ ಪತನವನ್ನು ಬಲು ನವಿರಾಗಿ, ಸಾನುಕಂಪದಿಂದ, ವಿಶದಪಡಿಸಿದೆ. ಅವರ ಸಣ್ಣಕತೆಗಳ ಸಂಕಲನವು ಅವರಿಗೆ 1968ರಲ್ಲಿ ಸಾಹಿತ್ಯ ಅಕಾಡೆಮಿ ಪ್ರಶಸ್ತಿ ಬರಲು ಕಾರಣವಾಯಿತಾದರೆ, ಅವರ 'ಚಿಕವೀರರಾಜೇಂದ್ರ' ಕಾದಂಬರಿಯಿಂದಾಗಿ 1983ರಲ್ಲಿ ಪ್ರತಿಷ್ಠೆಯ ಜ್ಞಾನಪೀಠ ಪ್ರಶಸ್ತಿ ಲಭ್ಯವಾಗುವಂತಾಯಿತು. ಅವರ ನಾಟಕ 'ಕಾಕನಕೋಟೆ'ಯನ್ನು ಚಲನ ಚಿತ್ರಕ್ಕೆ ಅಳವಡಿಸಲಾಗಿದೆ.

ಗಣನೀಯವಾದ ಇಷ್ಟೊಂದು ಸಾಹಿತ್ಯವನ್ನು ಸ್ವತಃ ಸೃಷ್ಟಿಸಿದ್ದರ ಜೊತೆ ಜೊತೆಯಲ್ಲೇ ಮಾಸ್ತಿಯವರು ಕರ್ನಾಟಕದ ಸಾಹಿತ್ಯ ಹಾಗೂ ಸಂಸ್ಕೃತಿಯ ಪುನರುಜ್ಜೀವನಕ್ಕೂ ಸಾಕಷ್ಟು ಕಾಣಿಕೆಯನ್ನು ಸಲ್ಲಿಸಿದ್ದಾರೆ. 21 ವರ್ಷಗಳಷ್ಟು ದೀರ್ಘಕಾಲ 'ಜೀವನ ಎಂಬ ಅತ್ಯುತ್ತಮವಾದ ಸಾಹಿತ್ಯದ ಪತ್ರಿಕೆಯನ್ನು ಬಹು ಅಚ್ಚುಕಟ್ಟಾಗಿ ಸಂಪಾದಿಸಿದರು. ಆ ವೇಳೆಯಲ್ಲಿ ಬಹುಮಂದಿ ತರುಣ ಸಾಹಿತಿಗಳು ಬೆಳಕಿಗೆ ಬರಲು ತಕ್ಕ ವೇದಿಕೆಯನ್ನು ಒದಗಿಸಿದರು. ತಮ್ಮ ಸಾಹಿತಿ ಬಂಧುಗಳಿಗೆ ಸಾಹಿತ್ಯಕ ವಿಚಾರಗಳಿಗೆ ಸಂಬಂಧಿಸಿದಂತೆ ಎಂದಿಗೂ ಒತ್ತಾಸೆಯಾಗಿಯೇ ನಿಂತಿದ್ದರು. ಸಾಹಿತ್ಯ ಪರಿಷತ್ತಿನ ಸ್ಥಾಪಕರಲ್ಲಿ ಒಬ್ಬರಾದ ಅವರು ಅದರ ಆಧಾರ ಸ್ತಂಭಗಳಲ್ಲಿಯೂ ಒಬ್ಬರಾಗಿದ್ದರು. 1943-47ರ ಅವಧಿಯಲ್ಲಿ ಅವರು ಪರಿಷತ್ತಿನ ಉಪಾಧ್ಯಕ್ಷರಾಗಿದ್ದಾಗ ಪರಿಷತ್ತು ಬಹುವಿಧದ ಅಭಿವೃದ್ಧಿಯನ್ನು ಪಡೆಯಿತು. ತರುಣ ಕನ್ನಡ ಸಾಹಿತಿಗಳಿಗೆ ಅವರು ನೀಡುತ್ತಿದ್ದ ಉತ್ತೇಜನ ಹಾಗೂ ಒತ್ತಾಸೆ ಅವರಿಗೇ ವಿಶಿಷ್ಟವಾದ ರೀತಿಯದಾಗಿತ್ತು.

ಮಾಸ್ತಿಯವರನ್ನು ಎಲ್ಲರೂ ಗೌರವ ಆದರಗಳಿಂದಲೇ ಕಂಡರು. ಇನ್ನೂ 38 ವರುಷದ ತರುಣರಾಗಿದ್ದಾಗಲೇ ಅವರನ್ನು ಬೆಳಗಾಂ ಕನ್ನಡ ಸಾಹಿತ್ಯ ಸಮ್ಮೇಳನಕ್ಕೆ ಅಧ್ಯಕ್ಷರನ್ನಾಗಿ ಚುನಾಯಿಸಲಾಯಿತು. ಹೀಗೆ ಅವರಿಗೆ ಸಂದ ಗೌರವಾನ್ವಿತವಾದ ಅಧಿಕಾರಗಳಲ್ಲಿ, 1942ರಲ್ಲಿ ಹೈದರಾಬಾದಿನಲ್ಲಿ ನಡೆದ ಅಖಿಲ ಭಾರತೀಯ ಪೂರ್ವರಾಜ್ಯಗಳ ಸಮ್ಮೇಳನದ ಕನ್ನಡ ವಿಭಾಗದ ಅಧ್ಯಕ್ಷರಾಗಿದ್ದು, 1946ರಲ್ಲಿ ಮದ್ರಾಸಿನಲ್ಲಿ ನಡೆದ ಭಾರತೀಯ ದಕ್ಷಿಣ ಭಾಷಾಸಮ್ಮೇಳನದ ಅಧ್ಯಕ್ಷ

ರಾಗಿದ್ದು, 1954ರಲ್ಲಿ ಪೂನಾ ವಿಶ್ವವಿದ್ಯಾನಿಲಯದ ಭಾಷಾಸಮ್ಮೇಳನದಲ್ಲಿ ರಾಷ್ಟ್ರಭಾಷಾ ವಿಭಾಗದ ಅಧ್ಯಕ್ಷರಾಗಿದ್ದು, 1961ರಲ್ಲಿ ಬೊಂಬಾಯಿಯಲ್ಲಿ ನಡೆದ ಅಖಿಲ ಭಾರತೀಯ ಬರಹಗಾರರ ಸಮ್ಮೇಳನದ ಅಧ್ಯಕ್ಷರಾಗಿದ್ದು, 1964ರಲ್ಲಿ ಭಾರತೀಯ PENನ ಉಪಾಧ್ಯಕ್ಷರಾಗಿದ್ದು ಹಾಗೂ ಅದೇ ಸಂಸ್ಥೆಯ ಅಧ್ಯಕ್ಷರಾಗಿ 1976ರಿಂದ ಇದ್ದದ್ದು—ಇವೆಲ್ಲ ಸೇರಿವೆ. 1956ರಲ್ಲಿ ಕರ್ನಾಟಕ ವಿಶ್ವವಿದ್ಯಾನಿಲಯ ಹಾಗೂ 1977ರಲ್ಲಿ ಮೈಸೂರು ವಿಶ್ವವಿದ್ಯಾನಿಲಯಗಳು ಮಾಸ್ತಿಯವರಿಗೆ ಗೌರವ ಡಾಕ್ಟರೇಟ್ ಪದವಿಗಳನ್ನು ನೀಡಿ ಸನ್ಮಾನಿಸಿದವು. ಕೇಂದ್ರ ಸಾಹಿತ್ಯ ಅಕಾದಮಿಯು 1974ರಲ್ಲಿ ಅವರಿಗೆ ಫೆಲೋಶಿಪ್ ನೀಡಿ ಗೌರವಿಸಿತಾದರೆ, 1986ರಲ್ಲಿ ಕನ್ನಡ ಸಾಹಿತ್ಯ ಪರಿಷತ್ ಸಹ ಅದೇ ರೀತಿಯಲ್ಲಿ ಗೌರವಿಸಿತು.

ಮಾಸ್ತಿಯವರ ಜೀವನ ಹಾಗೂ ಅವರ ಕೃತಿಗಳು ಪ್ರಾಚೀನ, ಆಧುನಿಕ, ಸಂಪ್ರದಾಯಶೀಲ–ಪ್ರಗತಿಶೀಲ, ನಿಯತ-ಆಕಸ್ಮಿಕ, ವಾಸ್ತವಿಕತೆ–ಆಧ್ಯಾತ್ಮಿಕತೆ, ಪೂರ್ವ–ಪಶ್ಚಿಮ–ಹೀಗೆ ಎಲ್ಲ ರಂಗಗಳಲ್ಲೂ ಸಮನ್ವಯಾತ್ಮಕವಾದುದಾಗಿತ್ತು. ಟಾಲ್‌ಸ್ಟಾಯ್‌ನಂತೆಯೇ ಅತ್ಯಂತ ಸಹಜವಾದ ಅವರ ಒಳ್ಳೆಯ ಸ್ವಭಾವ ಯಾವಾಗಲೂ ಸೃಷ್ಟಿಯಲ್ಲಿನ ಎಲ್ಲ ಒಳ್ಳೆಯ ಹಾಗೂ ಸುಂದರ ಅಂಶಗಳನ್ನು ಗುರುತಿಸಿ ಎತ್ತಿ ಹಿಡಿಯುವಂತಹುದು. ಪ್ರಾಚೀನ ಭಾರತೀಯ ಸಂಸ್ಕೃತಿಯಲ್ಲೇ ಅವರ ಭಾವದ ಬೇರುಗಳು ಆಳವಾಗಿ ನೆಲೆಯೂರಿದ್ದರೂ, ಯೋಗ್ಯವಾದ ಯಾವುದೇ ಆಲೋಚನೆಗಳನ್ನು, ಅವು ಎಲ್ಲಿಂದಲೇ ಬಂದಿದ್ದರೂ, ಗ್ರಹಿಸಿ ಸ್ವೀಕರಿಸಲು ಸದಾ ಸಿದ್ಧವಾಗಿದ್ದರು. ಯಾರ ಬಗೆಗೂ ದ್ವೇಷಾಸೂಯೆಗಳನ್ನು ತೋರದ ಅವರು ತಮ್ಮ ಸುತ್ತಲಿನ ಎಲ್ಲರನ್ನೂ ಪ್ರೀತ್ಯಾದರಗಳಿಂದಲೇ ಕಾಣುತ್ತಿದ್ದರು. ನಿಷ್ಠುರ ಆಧ್ಯಾತ್ಮಿಕವಾದಿಯಾದರೂ ಅಷ್ಟೇ ಮಾನವೀಯ ಸ್ವಭಾವದವರಾಗಿದ್ದರು. ತಾವು ನಂಬಿದ ವಿಶಿಷ್ಟಾದ್ವೈತ ಸಂಪ್ರದಾಯಕ್ಕೆ ತತ್ವನಿಷ್ಠರಾಗಿದ್ದಂತೆಯೇ ಅವರ ಇಡೀ ಜೀವನ, ಭಕ್ತಿ ಹಾಗೂ ಪ್ರಪತ್ತಿಗಳ ಮಧುರ ಸಮ್ಮಿಲನವಾಗಿತ್ತು.

ಮಾಸ್ತಿ ವೆಂಕಟೇಶ ಅಯ್ಯಂಗಾರ್‌ರು ಆಧುನಿಕ ಕನ್ನಡ ಸಾಹಿತ್ಯದ ಜನಕರಷ್ಟೆ ಅಲ್ಲ, ಭಾರತೀಯ ಸಾಹಿತ್ಯವು ಈ ಯುಗದಲ್ಲಿ ಕಂಡ ಅತ್ಯಂತ ಪ್ರಮುಖ ವ್ಯಕ್ತಿ.

ತಮ್ಮ 96ನೆಯ ಜನ್ಮದಿನದಂದೇ, ಅಂದರೆ 6-6-1986ರಂದು ಸುಮಾರು ಒಂದು ಶತಮಾನದ ವೈಭವಯುತವಾದ ತುಂಬು ಜೀವನವನ್ನು ನಡೆಸಿದ ಅವರು ಕೊನೆಯುಸಿರನ್ನೆಳೆದರು.

## 'ಶ್ರೀನಿವಾಸ'ರ (ಮಾಸ್ತಿ ವೆಂಕಟೇಶ ಅಯ್ಯಂಗಾರ್)
### ಪುಸ್ತಕಗಳು

ಕಥಾಸಾಹಿತ್ಯ

1. ಸುಬ್ಬಣ್ಣ (ಕಿರು ಕಾದಂಬರಿ) 1928
2. ಚೆನ್ನಬಸವನಾಯಕ (ಕಾದಂಬರಿ) 1949
3. ಚಿಕವೀರ ರಾಜೇಂದ್ರ (ಕಾದಂಬರಿ) 1956
4. ಶೇಷಮ್ಮ (ಕಾದಂಬರಿ)
5. ಮಾತುಗಾರ ರಾಮಣ್ಣ (ಕಾದಂಬರಿ)
6. ಸಣ್ಣಕತೆಗಳು (15 ಸಂಪುಟಗಳು) 1920–79

ಕಾವ್ಯ

7. ಬಿನ್ನಹ 1922
8. ಅರುಣ 1924
9. ತಾವರೆ 1900
10. ಚೆಲುವ 1931
11. ಮಲಾರ 1933
12. ಗೌಡರ ಮಲ್ಲಿ 1940
13. ರಾಮನವಮಿ 1941
14. ಮೂಕನ ಮಕ್ಕಳು 1943
15. ಸುನೀತ 1946
16. ಮನವಿ 1951
17. ನವರಾತ್ರಿ (5 ಸಂಪುಟಗಳು) 1944--48
18. ಸಂಕ್ರಾಂತಿ 1969
19. ಶ್ರೀರಾಮ ಪಟ್ಟಾಭಿಷೇಕ 1972

ನಾಟಕಗಳು

20. ತಾಳೀಕೋಟೆ 1920
21. ಶಾನ್ತಾ 1923

2. ಸಾವಿತ್ರಿ 1923
3. ಉಷಾ 1927
4. ಮಂಜುಳಾ 1930
5. ಶಿವಛತ್ರಪತಿ 1932
6. ಯಶೋಧರಾ 1933
7. ತಿರುಪಾಣಿ 1937
8. ಕಾಕನಕೋಟೆ 1938
9. ಮಾಸತಿ 1953
0. ಅನಾರ್ಕಲಿ 1955
1. ಪುರಂದರದಾಸ 1964
2. ಕನಕಣ್ಣ 1965
3. ಭಟ್ಟರ ಮಗಳು 1969
4. ಬಾನುಲಿ ದೃಶ್ಯಗಳು
5. ಅಜ್ಜನ ದಾರಿ
6. ಕಾಳಿದಾಸ
7. ವಿಮಲಾ ಮರಿಯಾನ್

ಉಪನ್ಯಾಸ ಮತ್ತು ವಿಮರ್ಶೆ

8. ಸಾಹಿತ್ಯ 1924
9. ಕನ್ನಡದ ಸೇವೆ 1930
0. ಕರ್ನಾಟಕದ ಜನತೆಯ ಸಂಸ್ಕೃತಿ 1931
1. ಆದಿಕವಿ ವಾಲ್ಮೀಕಿ 1938
2. ತಾಯ್ನುಡಿಯ ತಮ್ಮಡಿ 1944
3. ಭಾರತ ತೀರ್ಥ 1952
4. ಕರ್ನಾಟಕದ ಜನಪದ ಸಾಹಿತ್ಯ 1956
5. ಕನ್ನಡ ಲೆಂಕ 1957
6. ಸಾಹಿತ್ಯದಿಂದ ಆಗುವ ಕೆಲಸ 1971
7. ವಿಚಾರ 1971
8. ವಿಮರ್ಶೆ (4 ಸಂಪುಟಗಳು) 1926–65
9. ಉತ್ತರಕಾಂಡ-ವಿಚಾರ (5 ಸಂಪುಟಗಳು) 1946–82

## ಜೀವನ ಚರಿತ್ರೆ

50. ರವೀಂದ್ರನಾಥ ಠಾಕೂರರು 1935
51. ಶ್ರೀ ರಾಮಕೃಷ್ಣ 1936
52. ಭಾವ (ಆತ್ಮಚರಿತೆ, 3 ಸಂಪುಟಗಳು) 1968-69
53. ನವರತ್ನರಾಮರಾವ್ 1976

## ಸಂಕೀರ್ಣ

54. ಪೂಜನ (ಮುನ್ನುಡಿಗಳ ಸಂಗ್ರಹ) 1951
55. ಚಿಂತನ 1952
56. ನಮ್ಮ ನುಡಿ (ಭಾಷಾಶಾಸ್ತ್ರ) 1960
57. ಸಾಹಿತ್ಯ ಲಾಲನೆ 1967
58. ಸಂಪಾದಕೀಯ (ಐದು ಸಂಪುಟಗಳು) 1967
59. ಸಾಹಿತ್ಯ ಪ್ರೇರಣೆ 1975
60. ಪತ್ರಗಳು 1976
61. ಅಂತರಗಂಗೆ
62. ಧರ್ಮ ಸಂರಕ್ಷಣೆ
63. ಪ್ರಸಂಗ (ಐದು ಸಂಪುಟಗಳು)
64. ಅರ್ಚನ

## ಭಾಷಾಂತರ

65. ಚಿತ್ರಾಂಗದ 1945
66. ಹ್ಯಾಮ್‌ಲೆಟ್ 1958
67. ಚಂಡಮಾರುತ 1959
68. ಲಿಯರ್ ಮಹಾರಾಜ 1959
69. ಶ್ರೀಕೃಷ್ಣ ಕರ್ಣಾಮೃತ 1959
70. ದ್ವಾದಶ ರಾತ್ರಿ 1960
71. ಷೇಕ್ಸ್‌ಪಿಯರ್ ದೃಶ್ಯಗಳು (3 ಸಂಪುಟಗಳು) 1962-64
72. ಸಂಕ್ಷಿಪ್ತ ವಾಲ್ಮೀಕಿ ರಾಮಾಯಣ

ಸಂಪಾದಿತ

73. ಬಿಜ್ಜಳರಾಯ ಚರಿತೆ 1954
74. ಕರ್ನಾಟಕ ಭಾರತ ಕಥಾಮಂಜರಿ 1958
75. ಸರ್. ಎಂ. ವಿಶ್ವೇಶ್ವರಯ್ಯನವರು 1960
76. ರವೀಂದ್ರ ಪ್ರಶಸ್ತಿ 1962
77. ರವೀಂದ್ರ ಪೂಜನ 1963
78. ವಿಶ್ವಮಾನವನೆಡೆಗೆ 1964

ಇಂಗ್ಲಿಷಿನಲ್ಲಿ

79. Sayings of Basavanna 1935
80. Popular culture in Karnataka 1937
81. The poetry of valmiki 1940
82. Subbanna 1943
83. Ravindranatha Tagore 1946
84. Channabasavanayaka 1957
85. The Mahabharata 1973
86. Rajaji (2 vols) 1975
87. Essays, Addresses Etc 1975
88. Short Stories, (5 vols) 1943-68
89. Srimad Bhagavad-Gita
90. Kalidasa
91. Addresses
92. Thinking on my life
93. Thoughts on Religion

---



---

ಅಸಹಾಯಕ ವಿಧವೆಯರ ಸಂಕಷ್ಟಗಳನ್ನು ಕಡಿಮೆ ಮಾಡುವ ಒಂದು ಪ್ರಯತ್ನ :

## ಅಸಹಾಯಕ ವಿಧವೆಯರ ಸಂಕಷ್ಟಗಳನ್ನು ಕಡಿಮೆ ಮಾಡಲು ಒಂದು ಪ್ರಯತ್ನ; ನಿರಾಶ್ರಿತ ವಿಧವೆಯರಿಗೆ ಮಾಸಾಶನ ಯೋಜನೆ

ದಿಕ್ಕಿಲ್ಲದ, ನನ್ನವರೆನ್ನಲು ಯಾರೂ ಇರದ, ಅನಾಥ ವಿಧವೆಯರಿಗೆ ಒಂದು ಸಹಾಯ ಹಸ್ತ. ಈಗ ಅವರು ತಿಂಗಳಿಗೆ 50 ರೂ. ಗಳ ಮಾಸಾಶನ ಪಡೆಯಲು ಅರ್ಜಿ ಹಾಕಿಕೊಳ್ಳಬಹುದು.

**ಅರ್ಹತೆಗಳು :-**

18 ವರ್ಷಕ್ಕೆ ಮೇಲ್ಪಟ್ಟಿರಬೇಕು.

ಕರ್ನಾಟಕದಲ್ಲಿ 3 ವರ್ಷಕ್ಕಿಂತಲೂ ಹೆಚ್ಚು ಕಾಲದಿಂದ ವಾಸ ಮಾಡುತ್ತಿರಬೇಕು.

ವಾರ್ಷಿಕ ಆದಾಯ 1500 ರೂ.ಗಳಿಗೂ ಕಡಿಮೆ ಇರಬೇಕು.

ಅರ್ಜಿ ನಮೂನೆಗಳು ಹಾಗೂ ವಿವರಗಳು ಪಂಚಾಯಿತಿ, ತಾಲ್ಲೂಕು ಮುನಿಸಿಪಲ್ ಅಥವಾ ಕಾರ್ಪೊರೇಷನ್ ಕಛೇರಿಗಳಲ್ಲಿ ಲಭಿಸುತ್ತವೆ.

ಖಾಲೀ ಹಾಳೆಯಲ್ಲಿ ಬರೆದುಕೊಂಡ ಅರ್ಜಿಗಳನ್ನು ಸ್ವೀಕರಿಸಲಾಗುತ್ತದೆ.

**ಅರ್ಜಿಗಳ ಜೊತೆ ಲಗತ್ತಿಸಬೇಕಾದ ಪ್ರಮಾಣ ಪತ್ರಗಳು :**

ಜನನ ಮರಣಗಳ ರಿಜಿಸ್ಟ್ರಾರ್ ಅಥವಾ ಅವರಿಂದ ಅಧಿಕಾರ ಪಡೆದವರು ನೀಡುವ ವಿಧವಾ ಪ್ರಮಾಣ ಪತ್ರ.

ಹುಟ್ಟಿದ ದಿನಾಂಕದ ಬಗ್ಗೆ ಪ್ರಮಾಣ ಪತ್ರ. ಅಥವಾ ಶಾಲಾ ಬಿಡುಗಡೆ ಪತ್ರ.

ಪಾಸ್‌ಪೋರ್ಟ್ ಅಳತೆಯ 3 ಭಾವ ಚಿತ್ರಗಳು.

ಈ ಮಾಸಾಶನದ ಅವಶ್ಯಕತೆಯಿರುವ ನಿರಾಶ್ರಿತ ವಿಧವೆಯರು ನಿಮಗೆ ತಿಳಿದಿದ್ದಲ್ಲಿ ಅವರಿಗೆ ಈ ಯೋಜನೆಯ ಬಗ್ಗೆ ತಿಳಿಸಿ. ಅವರು ಅರ್ಜಿ ಹಾಕಿಕೊಳ್ಳಲು ಸಹಾಯ ಮಾಡಿ.

ಅಸಹಾಯಕರಿಗೊಂದು ಸಹಾಯದ ಯೋಜನೆ

'ಕರ್ನಾಟಕ ವಾರ್ತೆ'

# ಅಂಗವಿಕಲ ಮಗುವಿಗೆ ವಿಶೇಷ ಆರೈಕೆ ಅಗತ್ಯ

ನಿಮ್ಮ ಮಗು ಅಂಗವಿಕಲವಾಗಿದ್ದರೆ ನಿರಾಶರಾಗದಿರಿ.

ನಿಮ್ಮ ಮಗುವಿಗೆ ಸಾಧ್ಯವಿರುವ ಎಲ್ಲಾ ಕಾರ್ಯಗಳ ಬಗ್ಗೆ ಚಿಂತಿಸಿರಿ.

ಅಂಗವಿಕಲ ಮಗು ನಿಮ್ಮ ಪ್ರೋತ್ಸಾಹದಿಂದ ಹೆಚ್ಚು ಕಡಿಮೆ ಸ್ವಾಭಾವಿಕ ಜೀವನ ನಡೆಸಲು ಮತ್ತು ಅಂಗವಿಕಲತೆಗೆ ಹೊಂದಿಕೊಳ್ಳಲು ಸಾಧ್ಯವಿದೆ.

ಮನೋದೌರ್ಬಲ್ಯದ ಮಗುವಿನೊಂದಿಗೆ ತಾಳ್ಮೆಯಿಂದ ವರ್ತಿಸಿ. ಆ ಮಗು ತನ್ನ ಮನೋವಿಕಲತೆಯ ಜೀವನಕ್ಕೆ ಹೊಂದಿಕೊಳ್ಳಲು ಸಹಕರಿಸಿ.

ನೆನಪಿಡಿ : ಅಂಗವಿಕಲತೆ ಮಗುವಿನ ತಪ್ಪಲ್ಲ. ಏನಾದರೂ ಅದು ನಿಮ್ಮ ಮಗು ಅಲ್ಲವೇ ?

ನೆನಪಿಡಿ : ಪ್ರತಿಯೊಂದು ಮಗುವಿನಲ್ಲೂ ವಿಶೇಷ ಚೈತನ್ಯವಿದೆ.
ಅದಕ್ಕೆ ನಿಮ್ಮ ಪ್ರೀತಿಯ ಅಗತ್ಯವಿದೆ.

ಹೆಚ್ಚಿನ ವಿವರಗಳಿಗೆ :

ನಿರ್ದೇಶಕರು
ಸಮಾಜ ಕಲ್ಯಾಣ ಇಲಾಖೆ
ಕರ್ನಾಟಕ ಸರಕಾರ
ಬೆಂಗಳೂರು. ಇವರನ್ನು ಸಂಪರ್ಕಿಸಿರಿ.

'ಕರ್ನಾಟಕ ವಾರ್ತೆ'

## ಯಾವುದೇ ವಾಹನವು ಅಪಘಾತ ಮಾಡಿ ಪರಾರಿಯಾಗಿ ನೀವು ನೊಂದಿದ್ದೀರಾ ?

ನಿಮ್ಮಲ್ಲಿ ಯಾರಾದರೂ ಆಕಸ್ಮಿಕವಾಗಿ ರಸ್ತೆಯ ಅಪಘಾತಕ್ಕೊಳಗಾಗಿ ಅಪಘಾತವೆಸಗಿದ ವಾಹನ ಪರಾರಿಯಾಗಿದ್ದಲ್ಲಿ ಹತಾಶರಾಗಬೇಡಿ. ಏಕೆಂದರೆ ಈ ಅಂತಹ ಅಪಘಾತದಿಂದ ತೊಂದರೆಗೀಡಾದವರಿಗೆ "ಸೊಲೇಷಿಯಂ" ಅಥವಾ ಸಮಾಧಾನಾರ್ಥ ನಿಧಿಯಿಂದ ಪರಿಹಾರ ಒದಗಿಸಲಾಗುವುದು.

**ಸೊಲೇಷಿಯಂ ಅಥವಾ ಸಮಾಧಾನಾರ್ಥ ಪರಿಹಾರ ನಿಧಿ ಎಂದರೇನು ?**

ಅಪಘಾತವೆಸಗಿ ವಾಹನ ಪರಾರಿಯಾದ ಸಂದರ್ಭಗಳಲ್ಲಿ ಅಪಘಾತಕ್ಕೀಡಾದವರಿಗೆ ಅಥವಾ ಅವರ ವಾರಸುದಾರರಿಗೆ ಪರಿಹಾರ ನೀಡಲು ಸರಕಾರ ರೂಪಿಸಿರುವ ನಿಧಿ.

ಅಪಘಾತಕ್ಕೆ ಕಾರಣವಾದ ವಾಹನವು ಪತ್ತೆಯಾಗದಿದ್ದಲ್ಲಿ ಈ ನಿಧಿಯಿಂದ ಕೂಡಲೇ ಪರಿಹಾರ ಒದಗಿಸಲಾಗುವುದು.

**ಅಪಘಾತ ಸಂಭವಿಸಿದ ನಂತರ ಏನು ಮಾಡಬೇಕು ?**

ಮೊದಲನೆಯದಾಗಿ : ಅಪಘಾತಕ್ಕೆ ಒಳಗಾದವರು ಅಥವಾ ಅವರ ವಾರಸುದಾರರು ಹತ್ತಿರದ ಪೊಲೀಸ್ ಠಾಣೆಯಲ್ಲಿ ಅಪಘಾತದ ಬಗ್ಗೆ ದೂರು ಸಲ್ಲಿಸಬೇಕು.

ನಂತರ : ಹತ್ತಿರದ ಪೊಲೀಸ್ ಠಾಣೆ ಅಥವಾ ಕಂದಾಯ ಇಲಾಖಾ ಕಛೇರಿಗಳಲ್ಲಿ ಉಚಿತವಾಗಿ ದೊರೆಯುವ ನಿಗದಿತ ಅರ್ಜಿ ಪತ್ರದಲ್ಲಿ ವಿವರ ನೀಡಬೇಕು. ಅರ್ಜಿಯೊಂದಿಗೆ ವೈದ್ಯಕೀಯ ಪ್ರಮಾಣ ಪತ್ರವೊಂದನ್ನು ಲಗತ್ತಿಸಿ, ಅದನ್ನು ಅಪಘಾತ ಸಂಭವಿಸಿದ ತಾಲ್ಲೂಕಿನ ತಹಸೀಲ್ದಾರರು ಅಥವಾ ಉಪ ವಿಭಾಗದ ಸಹಾಯಕ ಕಮೀಷನರಿಗೆ ಒಂದು ತಿಂಗಳ ಅವಧಿಯೊಳಗೆ ಸಲ್ಲಿಸಬೇಕು.

**ಪರಿಹಾರ ಧನದ ಪಾವತಿ :-**

ಅಪಘಾತ ಸಂಭವಿಸಿದ ತಾಲ್ಲೂಕಿನ ತಹಸೀಲ್ದಾರರು ಅಥವಾ ಉಪ ವಿಭಾಗದ ಸಹಾಯಕ ಕಮೀಷನರು ಈ ಕೆಳಕಂಡಂತೆ ಪರಿಹಾರ ಧನವನ್ನು ನೀಡುವ ಅಧಿಕಾರ ಪಡೆದಿದ್ದಾರೆ.

(1) ತೀವ್ರವಾಗಿ ಗಾಯಗೊಂಡವರಿಗೆ ರೂ. 1,000.

(11) ಅಪಘಾತದಲ್ಲಿ ಮಡಿದವರ ವಾರಸುದಾರರಿಗೆ ರೂ. 5,000.

**ಹೆಚ್ಚಿನ ವಿವರಗಳಿಗೆ ಬರೆಯಿರಿ :-**

**ಸಾರಿಗೆ ಕಮೀಷನರು, ಕರ್ನಾಟಕ ಸರ್ಕಾರ**

3ನೇಯ ಮಹಡಿ, ಬಹುಅಂತಸ್ತು ಕಟ್ಟಡ

ಡಾ: ಅಂಬೇಡ್ಕರ್ ವೀಧಿ

ಬೆಂಗಳೂರು-560 001

"ಕರ್ನಾಟಕ ವಾರ್ತೆ"

# ಸರಕಾರಿ ಮತ್ತು ಅರೆ ಸರ್ಕಾರಿ ಸಂಸ್ಥೆಗಳ ಸೇವೆಗಳಲ್ಲಿ ಪರಿಶಿಷ್ಟ ಜಾತಿ ಮತ್ತು ಪರಿಶಿಷ್ಟ ಬುಡಕಟ್ಟು ವರ್ಗದವರಿಗೆ ಸರಕಾರದ ವಿಶೇಷ ಸವಲತ್ತುಗಳು

ಪರಿಶಿಷ್ಟ ಜಾತಿ ಮತ್ತು ಪರಿಶಿಷ್ಟ ಬುಡಕಟ್ಟುಗಳಿಗೆ ಸೇರಿದವರಿಗೆ ಸರಕಾರಿ ಸೇವಾ ಹುದ್ದೆಗಳಲ್ಲಿ ಸೂಕ್ತ ಪ್ರಾತಿನಿಧ್ಯವನ್ನು ಕೊಡಲು, ಅವರ ಹಿತಾಸಕ್ತಿಯನ್ನು ರಕ್ಷಿಸಲು ಸರಕಾರ ವಿಶೇಷ ಕ್ರಮಗಳನ್ನು ಕೈಗೊಂಡಿದೆ, ಈಗ ಸರಕಾರ ನೀಡುವ ವಿಶೇಷ ಸವಲತ್ತುಗಳೆಂದರೆ:-

1. ಸರಕಾರಿ ಸೇವಾ ಹುದ್ದೆಗಳಿಗೆ ಅಭ್ಯರ್ಥಿಗಳನ್ನು ಆಯ್ಕೆ ಮಾಡಬೇಕಾಗಿ ಬಂದಾಗ ಪರಿಶಿಷ್ಟ ಜಾತಿ ಮತ್ತು ಪರಿಶಿಷ್ಟ ಬುಡಕಟ್ಟುಗಳವರನ್ನು ಪ್ರತ್ಯೇಕವಾಗಿ ಸಂದರ್ಶನಕ್ಕೆ ಕರೆಯುವುದು,
2. ಸರಕಾರಿ ಸೇವೆಗೆ ಆಯ್ಕೆಯಾಗಲು ಅವರಿಗೆ ಇತರರಿಗಿಂತ 5 ವರ್ಷ ಹೆಚ್ಚು ಗರಿಷ್ಟ ವಯೋಮಿತಿ.
3. ಲೋಕಸೇವಾ ಆಯೋಗ ಅಥವಾ ಇತರ ನೇಮಕಾತಿ ಸಮಿತಿಗಳು ನಡೆಸುವ ಸ್ಪರ್ಧಾ ಪರೀಕ್ಷೆಗಳಿಗೆ ನಿಗದಿಪಡಿಸಿದ ಶುಲ್ಕದಿಂದ ಸಂಪೂರ್ಣ ರಿಯಾಯಿತಿ.
4. ಸರ್ಕಾರಿ ಸೇವೆಯಲ್ಲಿ ಖಾಲಿ ಹುದ್ದೆಗಳನ್ನು ಭರ್ತಿ ಮಾಡುವುದಕ್ಕಾಗಿ ನಿಗದಿ ಪಡಿಸಿರುವ ರೋಸ್ಟರ್‌ಗಳಲ್ಲಿ ಪ್ರಥಮ ಮತ್ತು ದ್ವಿತೀಯ ಸ್ಥಾನಗಳು ಕ್ರಮವಾಗಿ ಪರಿಶಿಷ್ಟ ಜಾತಿ ಮತ್ತು ಪರಿಶಿಷ್ಟ ಬುಡಕಟ್ಟುಗಳವರಿಗೆ ದೊರೆಯುವಂತೆ ಏರ್ಪಾಡು.
5. ಪರಿಶಿಷ್ಟ ಜಾತಿ ಪಂಗಡಗಳಿಗೆ ಸೇರಿದ ಅರ್ಹ ಅಭ್ಯರ್ಥಿಗಳು ದೊರೆಯದಿದ್ದಲ್ಲಿ ಮೀಸಲಾತಿ ಹುದ್ದೆಗಳನ್ನು ಮೂರು ಕ್ಯಾಲೆಂಡರ್ ವರ್ಷಗಳವರಿಗೆ ಅವರಿಗಾಗಿಯೇ ಕಾಯ್ದಿರಿಸಲಾಗುವುದು.
6. ಹುದ್ದೆಗಳಿಗಾಗಿ ಅನುಭವದ ಅರ್ಹತೆಯಲ್ಲಿ ರಿಯಾಯಿತಿ.
7. ನೇರ ನೇಮಕಾತಿ ಮೂಲಕ ಭರ್ತಿ ಮಾಡಲ್ಪಡುವ ವಿವಿಧ ವರ್ಗದ ಹುದ್ದೆಗಳಲ್ಲಿ ಪರಿಶಿಷ್ಟ ಜಾತಿ ಮತ್ತು ಪರಿಶಿಷ್ಟ ಪಂಗಡಗಳ ಜನರ ಪ್ರಾತಿನಿಧ್ಯ ಅನುಕ್ರಮವಾಗಿ ಶೇಕಡಾ 15 ಮತ್ತು 3 ಕಿಂತ ಕಡಿಮೆ ಇರುವ ಇಲಾಖೆಗಳಲ್ಲಿ ಅಂತಹ ಹುದ್ದೆಗಳ ಮೀಸಲಾತಿ ಪ್ರಮಾಣವನ್ನು ಕ್ರಮವಾಗಿ ಶೇಕಡ 20 ಮತ್ತು 5ಕ್ಕೆ ಹೆಚ್ಚಿಸಲಾಗಿದೆ.
8. ಸರ್ಕಾರಿ ಹುದ್ದೆಗಳಲ್ಲಿ, ಅದರಲ್ಲೂ 'ಎ' ಮತ್ತು 'ಬಿ' ವರ್ಗದ ಹುದ್ದೆಗಳಲ್ಲಿ ದಕ್ಷತೆಯಿಂದ ಕಾರ್ಯ ನಿರ್ವಹಿಸಲು ಅನುಕೂಲವಾಗುವಂತೆ ಪರಿಶಿಷ್ಟ ಜಾತಿ ಮತ್ತು ಪರಿಶಿಷ್ಟ ಬುಡಕಟ್ಟುಗಳ ವಿಶೇಷ ತರಬೇತಿ ಮತ್ತು ಮಾರ್ಗದರ್ಶನ.
9. ಅನುಸೂಚಿತ ಜಾತಿ ಮತ್ತು ಬುಡಕಟ್ಟಿಗೆ ಸೇರಿದ ಅಭ್ಯರ್ಥಿಗಳು ಮೀಸಲಾತಿಯ ಸಹಾಯವಿಲ್ಲದೆ ಅರ್ಹತೆಗನುಗುಣವಾಗಿ ಆಯ್ಕೆಯಾದರೆ ಅಂತಹ ಅಭ್ಯರ್ಥಿಗಳನ್ನು ಮಿಸಲಾತಿ ಹುದ್ದೆಯಲ್ಲಿ ಎಣಿಸಲಾಗುವುದಿಲ್ಲ. ಇಂತಹ ಅಭ್ಯರ್ಥಿಗಳನ್ನಲ್ಲದೆ ಪ್ರತ್ಯೇಕವಾಗಿ ಮೀಸಲಾತಿ ಹುದ್ದೆಗಳಿಗೆ ನೇಮಕಾತಿ.
10. ಪದೋನ್ನತಿಯಲ್ಲಿ ಮೀಸಲಾತಿ ಹಾಗೂ ಪದೋನ್ನತಿಗಾಗಿ ನಿಗದಿಪಡಿಸಿರುವ ಕನಿಷ್ಟ ಸೇವೆಯಲ್ಲಿ ರಿಯಾಯಿತಿ.
11. ಸರಕಾರಿ ನೌಕರರ ವಾಸಕ್ಕಾಗಿ ಕಟ್ಟಲಾದ ಮನೆಗಳಲ್ಲಿ ಶೇಕಡಾ 20 ರಷ್ಟನ್ನು ಮೀಸಲಾಗಿಡಲು ಆದೇಶ....ಹೀಗೆ ವಿಶೇಷ ಒಂದೆರಡಲ್ಲ ಇವೆಲ್ಲವುಗಳ ಸದುಪಯೋಗ ಮಾಡಿಕೊಂಡರೆ ಪರಿಶಿಷ್ಟ ಜಾತಿ ಮತ್ತು ಪರಿಶಿಷ್ಟ ಬುಡಕಟ್ಟುಗಳವರ ಸರ್ವತೋಮುಖ ಏಳಿಗೆಯಾಗುವುದರಲ್ಲಿ ಸಂಶಯವೇ ಇಲ್ಲ.

ಪರಿಶಿಷ್ಟ ಜಾತಿ ಮತ್ತು ಪಂಗಡಗಳಿಗೆ ಸರಕಾರಿ ಸೇವೆಗಳಲ್ಲಿ ಸೌಲಭ್ಯ ಕಲ್ಪಿಸಿಕೊಟ್ಟ ಪ್ರಮಾಣದಲ್ಲಿಯೇ ಸರಕಾರಿ ಸಾಮ್ಯಕ್ಕೊಳಪಟ್ಟ ಕಂಪನಿಗಳು. ನಿಗಮಗಳು. ಬೋರ್ಡ್‌ಗಳು ಮತ್ತು ಇತರ ಸಾರ್ವಜನಿಕ ಉದ್ಯಮ ಸಂಸ್ಥೆಗಳೂ ತಮ್ಮ ನೌಕರರ ವರ್ಗಕ್ಕೂ ನೀಡಬೇಕೆಂಬ ಆದೇಶ.

ಸರಕಾರಿ ಸೇವೆಯಲ್ಲಿ ಪರಿಶಿಷ್ಟ ಜಾತಿ ಮತ್ತು ಪಂಗಡಗಳ ಪ್ರಾತಿನಿಧ್ಯಕ್ಕೆ ಸಂಬಂಧಿಸಿದಂತೆ ಹೊರಡಿಸಲಾದ ಸರಕಾರಿ ಆದೇಶಗಳ ಜಾತಿಯ ಪ್ರಮಾಣವನ್ನು ಅವಲೋಕಿಸಿ ಸೂಕ್ತ ಸಲಹೆಗಳನ್ನು ಮಾಡುವುದಕ್ಕಾಗಿ ಮಾನ್ಯ ಮಂತ್ರಿಗಳ ಅಧ್ಯಕ್ಷತೆಯಲ್ಲಿ ಒಂದು ಉನ್ನತ ಮಟ್ಟದ ಸಮಿತಿಯ ರಚನೆ.

'ಕರ್ನಾಟಕ ವಾರ್ತೆ'